



# ಸಪ್ತಗಿರಿ

ಬೆಲೆ: ಒಂದು ರೂಪಾಯಿ

ಆಗಸ್ಟ್ 84





ತಿರುಮಲ ತಿರುಪತಿ ದೇವಸ್ಥಾನಗಳ ಸಚಿತ್ರ ಮಾಸ ಪತ್ರಿಕೆ



ಇಂದು ಎನಗೆ ಗೋವಿಂದ ನಿನ್ನಯ ಪಾದಾರ
ವಿಂದವ ತೋರೋ ಮುಕುಂದನೇ ॥ ಪಲ್ಲವಿ ॥

ಮಂದರೋದ್ಧಾರನೆ ನಂದಗೋಪಿಯ ಕಂದ
ಇಂದಿರಾರಮಣನೆ ಗೋವಿಂದ ಗೋಕುಲಾನಂದ ॥ ಅ.ಪ ॥

ನೊಂದೆನಯ್ಯಾ ಭವ ಬಂಧನದೊಳು ಸಿಲುಕಿ
ಮುಂದೆ ದಾರಿ ಕಾಣದೆ ಕುಂದಿದೆ ಜಗದೊಳು
ಕಂದ ನಾನೆಂದೆನ್ನ ಕುಂದುಗಳನೆಣಿಸದೆ
ತಂದೆ ನೀ ಕಾಯೋ ಕಂದರ್ಪ ಜನಕನೆ

ಮೂಢತನದಿ ಬಲು ಹೇಡಿ ಜೀವನನಾಗಿ
ದೃಢ ಭಕ್ತಿಯ ಮಾಡಲಿಲ್ಲವೋ ಹರಿಯೇ
ನೋಡಲಿಲ್ಲವೊ ನಿನ್ನ ಪಾಡಲಿಲ್ಲವೋ ಮಹಿಮೆ
ಗಾಡಿಕಾರ ಕೃಷ್ಣ ಬೇಡಿಕೊಂಬೆನೋ ಸ್ವಾಮಿ

ಧಾರುಣಿಯೊಳು ಬಲುಭಾರ ಜೀವನನಾಗಿ
ಮೀರಿದಪ್ಪಿ ನಡೆದು ಸೇರಿದೆ ಕುಜನರ
ಆರೂ ಕಾಯುವರಿಲ್ಲ ಸೇರಿದೆ ನಿನಗೆಲ್ಲಾ
ಧೀರ ವೇಣುಗೋಪಾಲ ಪಾರುಗಾಣಿಸೊ ಸ್ವಾಮಿ

– ಶ್ರೀ ರಾಘವೇಂದ್ರಸ್ವಾಮಿಗಳು.

ಸಂದರ್ಶಿಸಿ ಆನಂದಿಸಿ

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ
# ತಿರುಮಲೆ

## ಬ್ರಹ್ಮೋತ್ಸವಗಳು

**1984 ಸೆಪ್ಟಂಬರ್, ಅಕ್ಟೋಬರ್**



## ಕಾರ್ಯಕ್ರಮ ವಿವರ

| ದಿನಾಂಕ | ವಾರ | ಹಗಲು ಉತ್ಸವ | ರಾತ್ರಿ ಉತ್ಸವ |
|---|---|---|---|
| 25–9–84 | ಮಂಗಳ | — | ಸೇನಾಪತಿ ಉತ್ಸವ, ಅಂಕುರಾರ್ಪಣೆ |
| 26–9–84 | ಬುಧ | ಧ್ವಜಾರೋಹಣ | ದೊಡ್ಡ ಶೇಷವಾಹನ |
| 27–9–84 | ಗುರು | ಚಿಕ್ಕ ಶೇಷವಾಹನ | ಹಂಸವಾಹನ |
| 28–9–84 | ಶುಕ್ರ | ಸಿಂಹವಾಹನ | ಮುತ್ತಿನ ಚಪ್ಪರವಾಹನ |
| 29–9–84 | ಶನಿ | ಕಲ್ಪವೃಕ್ಷವಾಹನ | ಸರ್ವಭೂಪಾಲವಾಹನ |
| 30–9–84 | ಭಾನು | ಮೋಹಿನೀ ಅವತಾರ | **ಗರುಡವಾಹನ** |
| 1–10–84 | ಸೋಮ | ಹನುಮದ್ವಾಹನ, ಸಂಜೆ : ವಸಂತೋತ್ಸವ | ಗಜವಾಹನ |
| 2–10–84 | ಮಂಗಳ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 3–10–84 | ಬುಧ | **ರಥೋತ್ಸವ** | ಅಶ್ವವಾಹನ |
| 4–10–84 | ಗುರು | ಅವಭೃತ | ಧ್ವಜಾವರೋಹಣ |

ಸೂಚನೆ : ಬ್ರಹ್ಮೋತ್ಸವದ ದಿನಗಳಲ್ಲಿ ಪ್ರತಿದಿನವೂ ಸಂಜೆ ವಿಶೇಷ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿದೆ. ಸಂಗೀತ, ಹರಿಕಥೆಗಳ ವಿಶೇಷ ಆಕರ್ಷಣೆಗಳಿರುತ್ತವೆ.

**ತಿರುಮಲೆ ತಿರುಪತಿ ದೇವಸ್ಥಾನಗಳು.**

**ನೀವೂ ಬನ್ನಿ, ನಿಮ್ಮವರನ್ನೂ ಕರೆತನ್ನಿ.**




ಗೌರವ ಸಂಪಾದಕರು :
ಜಿ. ಕುಮಾರಸ್ವಾಮಿರೆಡ್ಡಿ ಐ.ಎ.ಎಸ್.,

ಸಂಪಾದಕ :
ಕೆ. ಸುಬ್ಬಾರಾವ್, ಎಂ.ಎ.,

ಉಪಸಂಪಾದಕ :
ಬಿ. ಎನ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**


ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ. —ಸಂ॥


ಸಂಪುಟ ೧೫] ಆಗಸ್ಟ್ ೧೯೮೪ [ಸಂಚಿಕೆ ೩


# ವಿಷಯಸೂಚಿ


ಸಂಪಾದಕೀಯ ... 4

ಪಂಪಭಾರತದ ಶಿಶುಪಾಲವಧಾ ಪ್ರಸಂಗ
ಡಾ॥ ಎಸ್. ಅನಂತರಂಗಾಚಾರ್ ... 5

ಶ್ರೀಮದ್ಭಗವದ್ಗೀತೆ . 7

ಯಾದವಾಭ್ಯುದಯ — ಡಿ. ಕೃಷ್ಣ ಅಯ್ಯಂಗಾರ್ ... 9

ಶ್ರೀ ಕೃಷ್ಣನ ಜನ್ಮಲೀಲಾ ರಹಸ್ಯ — ನರಸಿಂಹ ಬ್ರಹ್ಮಚಾರಿ ... 13

ಕೃಷ್ಣಾವತಾರ ವೈಭವ — ಎಸ್. ನರಸಿಂಹಾಚಾರ್ಯ .. 17

ಕುರುಡುಮಲೆಯ ಗಣಪತಿ — ಕೆ. ಎನ್. ಅಪ್ರಮೇಯ ... 21

ಕಿಶೋರಜಗತ್

ಚೈತನ್ಯ ಪ್ರಭು — ಪ್ರೇಮಲೀಲಾ ನಾರಾಯಣಮೂರ್ತಿ ... 29

ಗೃಹಲಕ್ಷ್ಮಿ

ಶ್ರಾವಣಲಕ್ಷ್ಮಿ — ಅಪ್ಪರಾವ್‌ಚಾರ್ಯ ... 35

ಯುವವಾಣಿ

ಕುಮಾರವ್ಯಾಸನ ಕೃಷ್ಣರಾಯಭಾರ — ಎನ್. ಎಸ್. ಗದಗಕರ ... 28

ವಾರ್ತಾಲಹರಿ ... 37

ಆಡಳಿತ ನಿರ್ವಾಹಕ ಮಂಡಲಿಯ ತೀರ್ಮಾನಗಳು ... 39


ರಕ್ಷಾಪತ್ರ ಚಿತ್ರಗಳು :

ಮುಖಪುಟ: ಶ್ರೀಕೃಷ್ಣ—ಕೆ. ಜಗದೀಶ್, ಹಿಂಬದಿಯಲ್ಲಿ ವಾಮನನ ತ್ರಿವಿಕ್ರಮ ರೂಪಶಿಲ್ಪ.

ಒಳಪುಟಗಳಲ್ಲಿ: ಗಣಪತಿ – ಎಂ. ಶ್ರೀನಿವಾಸರಾವ್.
ರಾಘವೇಂದ್ರಸ್ವಾಮಿಗಳು – ಮಧುಗಿರಿ ರಾಮು.

# ಸಂಪಾದಕೀಯ

ಶರೀರಮಾದ್ಯಂ ಖಲು ಧರ್ಮ ಸಾಧನಂ – ಎಂದರು ಹಿರಿಯರು. ಧರ್ಮಸಾಧನ ಆದಂತಹ ಶರೀರ ನಾಶವಾಗುವುದೆಂಬ ಆತಂಕ ಹೊಂದಿ ಶರೀರ ಪೋಷಣೆಗೆ ಅಗತ್ಯವಾದ ಅನ್ನವನ್ನು–ಆಹಾರವನ್ನು – ಅನ್ನಾದ್ಭವಂತಿ ಭೂತಾನಿ ಎಂದು ಆರಂಭಿಸಿ ಅನ್ನವನ್ನು ಪರಬ್ರಹ್ಮ ರೂಪವೆಂದು ಗೌರವಿಸಿದರು.

ಹಸಿವುಗಳು ಹಲವಿರುವಾಗ ಅನ್ನವೊಂದರಿಂದಲೇ ಅಗತ್ಯ ಮುಗಿಯುವುದಿಲ್ಲ. ಅಗತ್ಯಗಳ ಪೂರೈಕೆಗೆ ಇನ್ನೂ ಹಲವು ಬೇಕು. ಈ ಹಲವುಗಳ ಗಳಿಕೆಗಾಗಿ ಕೋರಿಕೆಗಳನ್ನು ಹೊರಹಾಕಬೇಕು. ಈ ಹೊರಹಾಕುವ – ಭಾವಪ್ರಕಟನೆಯ ರೀತಿಯಲ್ಲಿ ಒಂದು ಸೂತ್ರ – ಕ್ರಮ ಇರುವುದರಿಂದಾಗಿಯೇ ವಿಶ್ವ ಜೀವಿಗಳ ಭಾವಪ್ರಕಟನೆ ಕೂಗು, ಸದ್ದು ಸ್ಥಾಯಿಯಲ್ಲಿ ನಿಂತರೆ ಮನುಷ್ಯನ ಸದ್ದು ಮಾತಾಗಿ, ಸಾಹಿತ್ಯವಾಗಿ ಕೊನೆಗೆ ಬ್ರಹ್ಮಾನಂದ ಸಾಧಕವಾದ ಪರಮವೇದ ಸೋಪಾನವಾಯಿತು.

ಆದರೆ ಮಾನವ ಜೀವನದಲ್ಲಿ ಉದರಂಭರಣ, ಭಾವಪ್ರಕಟನೆಗಳ ಹಂತದಲ್ಲೇ ನಿಲ್ಲದೆ ಭಾವ ಮೂಲದ– ಜೀವ ಮೂಲದ ಅನ್ವೇಷಣೆಯೂ ನಡೆಯುತ್ತ ಬಂದು, ಹೊಂದುವ, ಗಳಿಸುವ – ಗಳಿಸಿದ್ದನ್ನು ತನ್ನವರಿಗೆ ಮುಂದಿನವರಿಗೆ ಬಿಟ್ಟು ಹೋಗುವ ಆಸಕ್ತಿಯೂ ತುಂಬಿ ಬಂದದ್ದರಿಂದ, ಹಕ್ಕು ಹೊಣೆಗಾರಿಕೆಗಳೂ ಜೊತೆಗೇ ಕೂಡಿ ಬಂದವು.

ಇಹ ಪರಗಳಿಗೆ ಆವಶ್ಯಕವಾದ ಈ ಮೂಲ ಧರ್ಮಗಳನ್ನು ನಮ್ಮ ಪೂರ್ವಿಕರು ಎಂದೋ ಗುರುತಿಸಿ, ಇವುಗಳ ಬಗ್ಗೆ ಉಚಿತವಾದ ತಿಳುವಳಿಕೆಯನ್ನು ಹೊಂದಿದ್ದರು. ಎಂತಲೇ ಯಾರ ಹಕ್ಕುಗಳಿಗೂ ಭಂಗ ಬರದಂತಹ ರೀತಿಯ ಸಹಜೀವನ, ಸಹಭಾವನೆ, ಸಹದರ್ಶನ ಸಿದ್ಧಾಂತಗಳನ್ನು ಬೋಧಿಸಿದರು. ಆಗಾಗ ಪರಸ್ಪರ ವಿರುದ್ಧ ಶಕ್ತಿಗಳ ಸಂಘರ್ಷ ಆಗುವುದನ್ನು ತಪ್ಪಿಸಲು ಆತ್ಮಾವಲೋಕನ, ಸಂಯಮಗಳನ್ನು ಬೋಧಿಸಿದರು, ಹಾಗೆಂದೇ ಇಂದ್ರಿಯಗಳ ಕುದುರೆಯನ್ನೇರುವ ರಾವುತನೆಂದು ಆತ್ಮವನ್ನು ವರ್ಣಿಸಿದರು. ಶುನಿಚೈವ ಶ್ವಪಾಕೇಚ ಪಂಡಿತಾಃ ಸಮದರ್ಶಿನಃ ಎನ್ನುವ ಮಾತುಗಳ ಸಾರಾಂಶವೂ ಈ ಆತ್ಮಾವಲೋಕನತತ್ತ್ವ ದರ್ಶನವೇ.

ಈ ಹಿನ್ನೆಲೆಯಲ್ಲೇ ಈ ದೇಶ ಬಹುಭಾಷೆಗಳ, ಬಹುರೂಪಗಳ, ಸಂಗಮವಾಯಿತು. ನಮ್ಮದಲ್ಲದ ಅನೇಕ ಮತಗಳು ನಮ್ಮಲ್ಲಿ ಬೆರೆತುಹೋದವು.

ಇಂತಹ ಹಕ್ಕುಗಳ ಸಮಾನತೆಯನ್ನು ಗುರುತಿಸದಾದಾಗ ಒಬ್ಬ ರಾವಣನಿಂದಾಗಿ ರಾಮಾಯಣವೂ, ಒಬ್ಬ ದುರ್ಯೋಧನನಿಂದಾಗಿ ಕುರುಕ್ಷೇತ್ರವೂ ನಡೆಯುತ್ತವೆ ಎಂಬುದು ಇತಿಹಾಸದ ಪುಟಗಳಿಂದ ಸ್ಪಷ್ಟವಾಗತಕ್ಕ ಅಂಶ. ಭಾರತದಲ್ಲಿ ಎಷ್ಟೊಂದು ಏಳು ಬೀಳುಗಳಾದರೂ ಸನಾತನ ಧರ್ಮ ನಿಂತಿದೆಯೆಂದರೆ ಇದರಲ್ಲಿನ ಸಹಜೀವನ, ಸಹಭಾವನೆ, ಸಹದರ್ಶನ ಸಿದ್ಧಾಂತಗಳ ಬಗ್ಗೆ ಭಾರತೀಯರಿಗಿರುವ ನಂಬಿಕೆಯೇ ಕಾರಣ. ಹಾಗಾಗಿಯೇ ಆತ್ಮಶಕ್ತಿಯಿಂದಾಗಿ ಹಲವಾರು ತ್ಯಾಗಗಳನ್ನು ಮಾಡಿ ಲೌಕಿಕ ಸ್ವಾತಂತ್ರ್ಯವನ್ನೂ ರಾಜಕೀಯ ಸ್ವಾತಂತ್ರ್ಯವನ್ನೂ ಗಳಿಸಿದ್ದೇವೆ. ನಿಧಾನವಾಗಿ ಮುಂದೆ ಸಾಗಿದ್ದೇವೆ.

ಆದರೆ ಈ ಲೌಕಿಕವೂ, ರಾಜಕೀಯವೂ ಆದ ಸ್ವಾತಂತ್ರ್ಯಗಳಲ್ಲಿ ಉನ್ನತಿ ಗಳಿಸುವ ಹಾದಿಯಲ್ಲಿ ನಡೆದಿರುವ ನಾವು, ಕಳೆದುಕೊಂಡಿರುವುದೂ ಇದೆ. ನಮ್ಮ ದೇಶದಲ್ಲಿ ನಮ್ಮ ಪರಿಪಾಲನೆಯಲ್ಲೇ ನಾವು ನಮ್ಮ ಧರ್ಮದ ಬಗ್ಗೆಯೇ [illegible] ನಿರುತ್ಸಾಹಿಗಳಾಗಿದ್ದೇವೆ. ಐಹಿಕ ಸುಖಗಳನ್ನನುಭವಿಸುತ್ತಿರುವ ಪಶ್ಚಿಮಬುದ್ಧಿಗಳು ಭಾರತದ ಜ್ಞಾನ ಭಾಸ್ಕರನಿಗೆ [illegible] ಈ ಹೊತ್ತಿನಲ್ಲಿ ಭಾರತೀಯರು ಎಂದು ಹೇಳಿಕೊಳ್ಳಲು ನಮಗೆ ಅಂಜಿಕೆ, ಸಂಕೋಚ. ಸನಾತನ ಧರ್ಮ ಹಿಂದುಳಿದವನಾಗಿದೆ. ಹಿಂದೂ ಎಂದು ಹೇಳಿಕೊಳ್ಳಲು ಹಿಂಜರಿಕೆಯಾಗಿದೆ. ಮಿಂಚಿನ ಮಿಂಚಿನ ಬೆಳಕಿಗೆ ಭ್ರಮಿತರಾಗಿ ಸಂಪ್ರದಾಯವನ್ನು ಸಮೀಕ್ಷಿಸದೆಯೇ ಸಮಾಧಿಗೊಳಿಸುತ್ತಿದ್ದೇವೆ. ಹಗ್ಗ ಹಾವು ಸಿದ್ಧಾಂತದಲ್ಲಿ– ಒಳಿತನ್ನೂ ಅಪಾಯಕಾರಿಯೆಂದು ಭ್ರಮಿಸುತ್ತಿದ್ದೇವೆ.

ಈ ಭ್ರಮೆಯಿಂದ, ಕೀಳರಿಮೆಯಿಂದ ಹೊರ ಬಂದು ನಮ್ಮತನವನ್ನು ಗುರುತಿಸಿಕೊಂಡ ದಿನ ಸರ್ವಸ್ವಾತಂತ್ರ್ಯವನ್ನೂ ಗಳಿಸಿದಂತೆ ಆಗುತ್ತದೆ.

# ಪಂಪಭಾರತದ ಶಿಶುಪಾಲವಧಾಪ್ರಸಂಗ

ಮಹಾಭಾರತವು ಕೃಷ್ಣ ಮಹಿಮಾಪ್ರತಿಪಾದಕ ಗ್ರಂಥ. ಆದರುದ್ದಕ್ಕೂ ಸಮಯ ದೊರೆತಾಗಲೆಲ್ಲ ಕೃಷ್ಣನ ಮಹಿಮೆ ಪಾರಮ್ಯ ಮೊದಲಾದುವುಗಳಿಗೆ ಸಂಬಂಧಪಟ್ಟ ಅನೇಕ ವಿಷಯಗಳು ಉಕ್ತವಾಗಿವೆ. ಅವೂ ಬಹು ದೀರ್ಘವಾಗಿರುತ್ತವೆ. ಕೆಲವು ಅಧ್ಯಾತ್ಮ್ಯಪ್ರತಿಪಾದನೆಯ ರೂಪವನ್ನು ತಾಳಿರುತ್ತವೆ. ಅಂತಹ ಪ್ರಸಂಗಗಳಲ್ಲಿ ಶಿಶುಪಾಲ ವಧ ಪ್ರಕರಣವೂ ಒಂದು. ಇದು ವ್ಯಾಸಭಾರತದ ಸಭಾಪರ್ವದಲ್ಲಿ ೩೫ ಅಧ್ಯಾಯಗಳ ವಿಸ್ತಾರವನ್ನು ತಾಳಿದೆ. ಇದರ ಕಥಾಭಾಗವು ಹೀಗಿದೆ: ಪಾಂಡವರು ಶ್ರೀಕೃಷ್ಣನ ಪ್ರೇರಣೆಯಿಂದ, ಅವನ ಸಹಾಯದಿಂದ, ಅವನ ನೇತೃತ್ವದಲ್ಲಿ ರಾಜಸೂಯ ಯಾಗವನ್ನು ಬಹು ವಿಜೃಂಭಣೆಯಿಂದ ನಡೆಸುತ್ತಾರೆ. ಯಾಗವು ಮುಗಿದಮೇಲೆ ಅಗ್ರಪೂಜೆಯನ್ನು ಯಾರಿಗೆ ಮಾಡಬೇಕೆಂದು ಧರ್ಮರಾಜನು ಭೀಷ್ಮನನ್ನು ಕೇಳುವನು. ಭೀಷ್ಮನು ಕೃಷ್ಣನ ಹೆಸರನ್ನು ಸೂಚಿಸುವನು. ಅದರಂತೆ ಸಹದೇವನು ಕೃಷ್ಣನನ್ನು ಸರಿಯಾದ ಪೀಠದಲ್ಲಿ ಕುಳ್ಳಿರಿಸಿ ಸೂಕ್ತ ರೀತಿಯಲ್ಲಿ ಅಗ್ರಪೂಜೆಯನ್ನು ನಿರ್ವಹಿಸುವನು. ಇದರಿಂದ ಚೈದ್ಯ ಭೂಪತಿಯಾದ ಶಿಶುಪಾಲನಿಗೆ ಬಹಳ ಕೋಪ ಬರುವುದು. ಅವನು ಧರ್ಮರಾಜ ಭೀಷ್ಮ, ಕೃಷ್ಣರನ್ನು ಸ್ವೇಚ್ಛೆಯಿಂದ ದೂಷಿಸಿ ಸಭೆಯನ್ನು ಬಿಟ್ಟುಹೋಗುವನು. ಧರ್ಮರಾಯನು ಅವನನ್ನು ಸಮಾಧಾನಮಾಡಿ ಕರೆದು ತರಲು ಹೋಗುವನು. ಭೀಷ್ಮನು ಧರ್ಮರಾಜನನ್ನು ತಡೆದು ಕೃಷ್ಣನಿಗೆ ಅಗ್ರಪೂಜೆಯನ್ನು ಸಲ್ಲಿಸುವುದು ನ್ಯಾಯ ಸಮ್ಮತವೆಂದು ಸಮರ್ಥಿಸುವನು. ಕೃಷ್ಣನ ಪೂಜೆಯನ್ನು ಒಪ್ಪದವರನ್ನು ತಾನು ಕಾಲಿನಿಂದ ಮೆಟ್ಟುತ್ತೇನೆಂದು ಸಹದೇವನು ಆರ್ಭಟಿಸುವನು. ನಾರದನೂ ಕೃಷ್ಣನೇ ಅಗ್ರಪೂಜೆಗೆ ಅರ್ಹನೆಂದು ಸಿದ್ಧಾಂತಮಾಡುವನು. ಅದರಿಂದ ಕುಪಿತನಾದ ಶಿಶುಪಾಲನು ಅಲ್ಲಿದ್ದ ರಾಜರನ್ನು ಯುದ್ಧಮಾಡಲು ಉದ್ರೇಕಗೊಳಿಸುವನು. ಅದರಿಂದ ಭೀತನಾದ ಧರ್ಮಜನನ್ನು ಭೀಷ್ಮನು ಕೃಷ್ಣಮಹಿಮಾವಿವರಣೆಯಿಂದ ಸಮಾಧಾನಗೊಳಿಸುವನು. ಶಿಶುಪಾಲನು ಭೀಷ್ಮನನ್ನು ಬಯ್ದು ಧರ್ಮೋಪದೇಶದ ವ್ಯಾಜದಿಂದ ಹಕ್ಕಿಗಳನ್ನು ವಂಚಿಸಿ ಹೊಟ್ಟೆ ಹೊರೆಯುತ್ತಿದ್ದ ಹಂಸದ ಕಥೆಯನ್ನು ಹೇಳಿ ಭೀಷ್ಮನು ಅಂತಹವನೆಂದು ದೂಷಿಸುವನು. ಭೀಮನು ಕೆರಳಿ ಶಿಶುಪಾಲನ ಜನ್ಮವೃತ್ತಾಂತವನ್ನು ತಿಳಿಸಿ ಕೃಷ್ಣನಿಗೆ ಸಂದ ಅಗ್ರಪೂಜೆಗೆ ವಿರೋಧಿಸುವರೆಲ್ಲರೂ ಕೃಷ್ಣನೊಡನೆ ಯುದ್ಧಕ್ಕೆ ಬರಬಹುದೆಂದು ಸೂಚಿಸುವನು. ಧರ್ಮಜನ ಪ್ರಾರ್ಥನೆಯಂತೆ ಭೀಷ್ಮನು ವಿಸ್ತಾರವಾಗಿ ಕೃಷ್ಣನನ್ನು ಸ್ತುತಿಸಿ ಅವನ ಮಹಿಮೆಯನ್ನು ವಿವರಿಸುವನು. ಶಿಶುಪಾಲನಿಗೆ ಕೋಪವು ನೆತ್ತಿಗೇರುವುದು. ಅಲ್ಲಿದ್ದ ರಾಜರನ್ನೆಲ್ಲ ಹುರಿದುಂಬಿಸಿ ಯುದ್ಧಕ್ಕೆ ಸನ್ನದ್ಧನಾಗುವನು. ಅವನೊಡನೆ ಬಂದಿದ್ದ ರಾಜರಿಗೆ ಕೃಷ್ಣನು ಶಿಶುಪಾಲನ ಅಪರಾಧಗಳನ್ನೆಲ್ಲ ವಿವರವಾಗಿ ತಿಳಿಸುವನು. ರಾಜರು ಕೃಷ್ಣನ ವಿಷಯವಾಗಿದ್ದ ಕೋಪವನ್ನು ತ್ಯಜಿಸಿ ಹೊರಟು ಹೋಗುವರು. ಶಿಶುಪಾಲನು ವಿಶೇಷವಾಗಿ ಆರ್ಭಟಿಸಿ ಅಪಹಾಸ್ಯ ಮಾಡುವನು. ಕೃಷ್ಣನು ಬಹಳ ವ್ಯಗ್ರನಾಗಿ ಯುದ್ಧದ ವಿಷಯವನ್ನೇ ಬಿಟ್ಟು ತನ್ನ ಸುದರ್ಶನದಿಂದ ಶಿಶುಪಾಲನ ತಲೆಯನ್ನು ಕತ್ತರಿಸುವನು. ಮುಂದೆ ಪಾಂಡವರಿಂದ ಶಿಶುಪಾಲನಿಗೆ ಉತ್ತರ ಕ್ರಿಯೆಯು ನಡೆಯುವುದು.

ಇಷ್ಟು ವಿಷಯವಿಸ್ತಾರದಿಂದ ಕೂಡಿದ ಈ ಪ್ರಕರಣವನ್ನು ಕವಿತಾಗುಣಾರ್ಣವನಾದ ಪಂಪನು ತನ್ನ ಪಂಪಭಾರತದಲ್ಲಿ (ವಿಕ್ರಮಾರ್ಜುನ ವಿಜಯ) ೨೪ ಕಂದ ಪದ್ಯಗಳಲ್ಲಿ ಬಹು ಹೃದಯಂಗಮವಾಗಿ ವರ್ಣಿಸಿದ್ದಾನೆ. ಅವನು ತನ್ನ ಗ್ರಂಥಾರಂಭದಲ್ಲಿ ಸೂಚಿಸಿರುವಂತೆ ಸಮಸ್ತ ಭಾರತವನ್ನ ಅಪೂರ್ವವಾಗಿ ಒಂದೂ ಕುಂದಿಲ್ಲದಂತೆ ರಚಿಸಬೇಕಾಗಿರುವುದರಿಂದ ಅವನಿಗೆ ಯಾವುದನ್ನೂ ವಿವರವಾಗಿ ವಿಸ್ತಾರವಾಗಿ ವರ್ಣಿಸಲು ಅವಕಾಶವಿಲ್ಲ. ಅವನು ಹೇಳಬೇಕಾದ ವಿಷಯವನ್ನು ಆದಷ್ಟು ಸಂಗ್ರಹವಾಗಿ, ಆದಷ್ಟು ಕಡಿಮೆ ಪಾತ್ರಗಳ ಮೂಲಕ ಯಾವ ಅಸ್ಪಷ್ಟತೆಗೂ ಅವಕಾಶವಿಲ್ಲದೆ ಸಾಸುವೆಯಲ್ಲಿ ಸಾಗರವನ್ನು ತುಂಬುವ ಪ್ರತಿಭೆಯಿಂದ ನಿರೂಪಿಸಿದ್ದಾನೆ. ಅವನ ಒಂದೊಂದು ಮಾತುಗಳೂ ಕೊಡಲಿಯ ಪೆಟ್ಟಿನಂತೆ ಬಹು ಶಕ್ತಿಯುಕ್ತವಾಗಿರುತ್ತವೆ. ಒಂದೊಂದು ದೃಶ್ಯವೂ ಕಣ್ಣಿಗೆ ಕಟ್ಟಿದಂತಿರುತ್ತದೆ. ಈ ಕುಸುರಿಯ ಕೆಲಸವು ಸಾಹಿತ್ಯವಿದ್ಯಾಧರನಾದ ಪಂಪನಿಗಲ್ಲದೆ ಮತ್ತಾರಿಗೂ ಸಾಧ್ಯವಿಲ್ಲ. ಪಂಪಭಾರತದಲ್ಲಿ ಈ ಪ್ರಕರಣವು ಹೀಗೆ ಚಿತ್ರಿತವಾಗಿದೆ:–

ರಾಜಸೂಯಾಂತ್ಯದಲ್ಲಿ ಧರ್ಮರಾಯನು ದೀನಾನಾಥರಿಗೂ ದ್ವಿಜಮುನಿ – ವರ್ಗಕ್ಕೂ 'ಕಃ ಕೇನಾರ್ಥೀ ಕೋ ದರಿದ್ರಃ' ಎನ್ನುವಷ್ಟು, ನಿಜ ಧವಳಚ್ಛತ್ರಚಾಮರ ಸಿಂಹಾಸನಾದಿ ರಾಜ

ಡಾ|| ಎನ್. ಅನಂತರಂಗಾಚಾರ್



ಚಿಹ್ನಂಗಳೊಳೆಯೆ ಸರ್ವಸ್ವವೆಲ್ಲಮಂ ದಾನಗೊಟ್ಟು, ವ್ಯಾಸ, ಗಾಂಗೇಯ, ವಿದುರ, ಬಾಹ್ಲೀಕ, ಸೋಮದತ್ತ, ಭಗದತ್ತ, ಧೃತರಾಷ್ಟ್ರ, ದ್ರೋಣ, ಅಶ್ವತ್ಥಾಮ, ಕೃಪ, ಕೃತವರ್ಮರುಮಂ, ದುರ್ಯೋಧನ, ದುಃಶಾಸನ, ಕರ್ಣ, ಶಲ್ಯ, ಶಕುನಿಗಳುಮಂ ಆದರ ಸನ್ಮಾನಂಗಳೊಳಂ ಸಂತಸಬಡಿಸಿ ಧರ್ಮಪುತ್ರಂ 'ಪೇಳಿಂ ಈ ಸಭೆಯೊಳಗ್ರಪೂಜೆಗಾರ್' ತಕ್ಕರ್ ಎನೆ ಗಾಂಗೇಯಂ ಇಂತೆಂದಂ :-

ಬಲಿಯಂ ಕಟ್ಟಿದನಾವನ್, ಈ ಧರಣಿಯಂ
ವಿಕ್ರಾಂತದಿಂದಂ ರಸಾ
ತಳದಿಂದೆತ್ತಿದನಾವನ್, ಅಂದು ನರಸಿಂಹಾ
ಕಾರದಿಂ ದೈತ್ಯನಂ
ಚಲದಿಂ ಸೀಳ್ದವನಾವನ್ ಅಬ್ಧಿಮಥನ
ಪ್ರಾರಂಭದೊಳ್ ಮಂದರಾ
ಚಲಮಂ ತಂದವನಾವ ಆತನೆ ವಲಂ
ತಕ್ಕನ್ ಪೆರರ್ ತಕ್ಕರೇ ॥

ಬಲಿಯನ್ನು ಅಧೀನ ಮಾಡಿಕೊಂಡವನಾರು, ಹಿಂದೆ ಭೂಮಿಯನ್ನು ಪಾತಾಳದಿಂದ ಎತ್ತಿ ತಂದವನಾರು, ನರಸಿಂಹಾವತಾರದಿಂದ ರಾಕ್ಷಸನನ್ನು ಸೀಳಿದವನಾರು, ಕ್ಷೀರಸಮುದ್ರವನ್ನು ಮಥನ ಮಾಡುವ ಕಾಲದಲ್ಲಿ ಮಂದರ ಪರ್ವತವನ್ನು ತಂದವನಾವನು ? ಅವನೇ ಯೋಗ್ಯ. ಅಂತಹ ಕೃಷ್ಣನಿಗಿಂತ ಅರ್ಹರಾದವರು ಅಗ್ರಪೂಜೆಗೆ ಮತ್ತಾರಿದ್ದಾರೆ.

— ಈ ಮಾತಿನಿಂದ ಸಂತುಷ್ಟನಾದ ಧರ್ಮರಾಜನು ವಿಶೇಷ ಸಂತೋಷದಿಂದ ಹಾಗೆಯೇ ಮಾಡುವೆನು ಎಂದು ಕೃಷ್ಣನಿಗೆ ಅರ್ಘ್ಯವನ್ನು ಎತ್ತಿದಾಗ ;

ಮುಳಿದು ಶಿಶುಪಾಲನಾ ಸಭೆ।
ಯೊಳಗೆ ಮಹಾಪ್ರಳಯ ಜಳಧಿನಾದದಿನಿರದು॥
ಚ್ಚಳಿಸಿ ನುಡಿದಂ ತೆಗೆ ಕಳೆ ಕಳೆ।
ಹರಿಗೆತ್ತಿದನರ್ಘ್ಯದರ್ಘ್ಯಮಂ ಧರ್ಮಸುತಾ॥

ತೀವಿದ ನರೆಯುಂ ಡೊಳ್ಳುಂ।
ದೇವವ್ರತನೆನಿಸಿ ನೆಗಳ್ದ ಯಶಮುಂ ಬೆಂಸಿ॥
ನ್ನೀವುದು ಹರಿಗರ್ಘ್ಯಮನೆಂ।
ದಾವನುಮಿಾ ಭೀಷ್ಮರಂತು ನುಡಿದರು
ವೊಳರೇ॥

ಕುರು ವೃದ್ಧಂ ಕುಲ ವೃದ್ಧಂ।
ಸರಿತ್ಸುತಂ ತಕ್ಕನೆಂದು ನಂಬಿದ ಸಭೆಯೊಳ್॥
ದೊರೆಗಿಡಿಸಿ ನುಡಿದೊಡೇನೊಲ।
ವರಮೆನ್ನದೆ ನೀನುಮದನೆ ಕೊಂಡೆಸಗುವುದೇ॥

ಮನದೊಲವರಮುಳ್ಳೊಡೆ ಕುಡು।
ಮನೆಯೊಳ್ ಹರಿಗಗ್ರಪೂಜೆಯಂ
ಯಜ್ಞದೊಳೀ
ಮನುಜಾಧೀಶ್ವರ ಸಭೆಯೊಳ್।
ನೆನೆಯಲುಮಾಗದು ದುರಾತ್ಮನಂ
ಬೆಸಗೊಳ್ವಾ॥

ಆಳವರಿಯದೆಗ್ಗು ಬಳವಳ।
ಬೆಳವಿನೆಗಂ ಪಚ್ಚೆ ಪಸಿಯ ತುರುಕಾರಂಗ॥
ಗ್ಗಳಿಕೆಯನೆ ಮಾಡಿ ನೀನುಂ।
ಪಳಿಯಂ ಕಟ್ಟಿದೆಯೊ ಭೂಪರನಿಬರ
ಕೊರಲೊಳ್॥

ದೇವರನಡಿಗೆರಗಿಸಿ ಸಕ।
ಳಾವನಿತಳದದಟರಂ ಪಡಲ್ವಡಿಸಿದ ಶೌ॥
ರ್ಯಾವಷ್ಟಂಭದೊಳಾಸಿರೆ।
ಗೋವಳಿಗಂಗಗ್ರಪೂಜೆಯಂ ನೀನ್ ಕುಡುವಾ॥

ಸಮುಕಟ್ಟರಿಯದೆ ಹರಿಗ।
ರ್ಘ್ಯಮನೆತ್ತಿ ನಿಂದಿರ್ದ ಯಜ್ಞಮದು
ಮೊದಲೊಳ್ ತಾ॥
ನಮರ್ದುಮಮರ್ದಿ (ರದೆ) ತಣಿಯುಂ।
ಡಮರ್ದಂ ಗೋಮೂತ್ರದಿಂದೆ ಬಾಯ್ಮುಸಿದ
ವೋಲ್॥

ಕುಡವೇಳ್ವನ ಕುಡುವನ ಕುಡೆ
ಪಡೆವನ ಪೆಂಪೇಂ ನೆಗಳ್ತೆವಡೆಗುಮೊ
ನೋಳ್ಪಂ॥
ಕುಡವೇಳ್ಗೆಮ ಕುಡುವಣ್ಣಂ।
ಕುಡುಗೆಮ ಕುಡೆ ಕೊಳ್ವ
ಕಲಿಯುನರಿಯಲ್ಕಕ್ಕುಂ॥

— ಎಂದು ಅಷ್ಟರಿಂದಲೇ ತೃಪ್ತನಾಗದ ಶಿಶುಪಾಲನು ಕೃಷ್ಣನನ್ನು ಕುರಿತು ಹೇಳಿದನು.

ದೊರೆಯಕ್ಕುಮೆ ನಿನಗೆ ಯುಧಿ।
ಷ್ಠಿರನರ್ಘ್ಯಮನೆತ್ತೆ ಶಂಖದೊಳ್ ಪಾಲೆರೆದಂ॥
ತಿರೆ ಮಲಿನಮಿಲ್ಲದೊಳ್ಗುಲ।
ದರಸುಗಳಿರೆ ನೀನುಮಗ್ರಪೂಜೆಯನಾಂಪಾ॥

ಮನದೊಲವರದಿಂದೀ ಯಮ।
ತನಯನ ಕುಡುವಗ್ರಪೂಜೆ ಮತ್ಸನ್ನಿಧಿಯೊಳ್
ನಿನಗಶನಿಯ ಮಿಳ್ತುವ ನಂ।
ಜಿನ ದೊರೆಯೆಂದೊಣರ ನಂದಗೋಪಾಲ
ಸುತಾ॥

ಮನೆ ನಿನಗೆ ನಂದಗೋಪಾ।
ಲನ ಮನೆ ತುರುಗಾರ್ತಿ ನಿನಗೆ
ಮನೆವೆಂಡತಿ ಪ॥
ಚ್ಚನೆ ಪಸಿಯ ಗೋವನ್ನೈ ಕರ
ಮ(ನ)ಯದೆ ನಿನ್ನವಿಗಳವನರಿಯದೆ
ನೆಗಳ್ವೈ॥

ದನುಜಾಂತಕನೆಂಬೀ ನಿ।
ನ್ನ ನಚ್ಚಪೋದಂಕಮೆಲವೊ ಮುನ್ನೆನ್ನನ್ನಂ॥
ದನುಜಂ ಪುಟ್ಟಿದೆ ಸಂದುದು।
ನಿನಗೀ ಪೆಸರೆನ್ನ ಮುಂದೆಯುಂ ಸಂದಪುದೇ॥

ಅನಿರ್ದ ಸಭೆಯೊಳರ್ಘ್ಯಮ।
ನಾನಲ್ಲಾಟಿಸಿದ ನಿನ್ನ ಬಿಸುನೆತ್ತರನಿಂ॥
ತೀ ನೆರವಿ ನೋಡೆ ಕುಡಿಯದೊ।
ಡೇನೋ ಶಿಶುಪಾಲನೆಂಬ ಪೆಸರೆಸೆದಪುದೇ॥

ಮಾಸಾವೆ ಪಂದಿಯೆಂದೆನಿ।
ತಾನುಂ ತೆರನಾಗಿ ಡೊಂಬವಿದ್ದೆಯನಾಡಲ್॥
ನೀನರಿವೆಯುರದಿದಿರ್ಚಿದೊ।
ಡಾನರಿವೆಂ ನಿನ್ನನಿಲ್ಲಿ ದೆಸೆವಲಿಗೆಯ್ಯಲ್॥

ಅರಿಯದಿದಂ ಮಾಡಿದೆನೆ।
ನ್ನರಿಮಿಕೆಗೆ ಸೈರಿಸೆಂದು ನೀನ್
ಸಭೆಯೊಳ್ ಕಾ॥
ಲ್ಗೆರಗೆರಗು ಕೊಲ್ಲೆನೆಂವೆರ್ದ।
ತೆರವಿನೆಗಂ ಹರಿಯ ನೆರನನಸುರಂ ನುಡಿದಂ॥

ಆಗ ಸಭಾಸದರೆಲ್ಲರೂ ಹಾವನ್ನು ಎದುರಿಸಿದ ಹೇಡಿಗಳಂತೆ ಸ್ವಲ್ಪವೂ ಅಳ್ಳಾಡದೆ ಒಂದು ಮಾತನ್ನು ಆಡದೆ ಕುಳಿತಿರಲು ಕೃಷ್ಣನು ಶಿಶುಪಾಲನನ್ನು ಕುರಿತು ಹೀಗೆಂದನು ;

ನಿನ್ನಯ ತಾಯ್ ಸಾತ್ವತಿಯುಂ।
ನಿನ್ನಂ ತಂದೆನ್ನ ತೊಡೆಯ ಮೇಲಿರಿಪುವುದುಂ॥
ನಿನ್ನ ಲಲಾಟದ ಕಣ್ಣದು।
ಮುನ್ನಮೆ ಕಿಡೆ ನಿನ್ನ ಮೃತ್ಯುವೆನ್ನಯ
ಕೆಯ್ಯೊಳ್॥

ನೆರೆದುದನರಿದೀ ಕಿರಿಯವ।
ನರಿಯದೆ ಕೆಡೆ ನುಡಿದನಪ್ಪೊಡಂ ನೂರುವಂ॥
ನೆರೆ ಸಲಿಸುವುದೆಂದುದ ನಾಂ।
ಮರೆವೆನೆ ಬಯ್ ಬಯ್ಯೆ ಸಲಿಸುವೆಂ
ನೂರುವರಂ॥

ಮುನಿಯಲೆನಗಾಗ ಗಾಂಗೇ।
ಯನಿರ್ದನಿರ್ದಂ ಘಟೋದ್ಭವಂ ನೆಗಳ್ದ
ಪೃಥಾ॥
ತನಯರುಮಿರ್ದರ್ ದುರ್ಯೋ।
ಧನನಿರ್ದಂ ಕೇಳೆ ಪೇ(ಳ್ವರಾ) ಬಲ್ಲವರುಂ॥

ಎನೆಯೆನೆ ಬಾಯ್ಗಂ ಬಂದನಿ
ತನಿತುಮನಮರಾರಿ ಬಯ್ಯೆ ಸೈರಿಸಿ ನೂರೆ।
ಬನಿತುವರಂ ಮನ್ನಿಸಿ ನಸು।
ಕಿನಿಸದೆ ಮಿಗೆ ಕಿನಿಸಿ ದಿತಿಜಕುಳ ದವದಹನಂ।

(33 ನೇ ಪುಟ ನೋಡಿ)

# ಶ್ರೀಮದ್ಭಗವದ್ಗೀತೆ

## ೧೫ ನೆಯ ಅಧ್ಯಾಯ

ಶ್ರೀಭಗವಾನುವಾಚ–

ಊರ್ಧ್ವಮೂಲಮಧಃಶಾಖಂ
ಅಶ್ವತ್ಥಂ ಪ್ರಾಹುರವ್ಯಯಮ್ ।
ಛಂದಾಂಸಿ ಯಸ್ಯ ಪರ್ಣಾನಿ
ಯಸ್ತಂ ವೇದ ಸ ವೇದವಿತ್ ॥ 1

ಶ್ರೀಕೃಷ್ಣ : (ಸಂಸಾರವೆಂಬ ಮರವು) ಬೇರು (ಜಗತ್ತಿಗೆ ಕಾರಣನಾದ ಬ್ರಹ್ಮನು) ಮೇಲಿರುವ ದಾಗಿಯೂ, ಕೊಂಬೆಗಳು (ಜೀವರು) ಕೆಳಗಿರುವು ದಾಗಿಯೂ, ವೇದವಾಕ್ಯಗಳು ಎಲೆಗಳಾಗಿಯೂ, ಎಂದಿಗೂ ಹೋಗದಂಥದ್ದೆನಿಸಿ ನಾಳೆ ಇದ್ದೀತೋ ಇಲ್ಲವೋ ಎಂಬಂತಿರುವಂಥ ಅರಳಿಯ ಮರವೆಂದು ಹೇಳುತ್ತಾರೆ. ಇದನ್ನು ಯಾವನು ತಿಳಿ ಯುತ್ತಾನೋ ಅವನು ವೇದವನ್ನು ತಿಳಿದವನು.

ಅಧಶ್ಚೋರ್ಧ್ವಂ ಪ್ರಸೃತಾಸ್ತಸ್ಯ ಶಾಖಾಃ
ಗುಣಪ್ರವೃದ್ಧಾ ವಿಷಯಪ್ರವಾಲಾಃ ।
ಅಧಶ್ಚ ಮೂಲಾನ್ಯನುಸಂತತಾನಿ
ಕರ್ಮಾನುಬಂಧೀನಿ ಮನುಷ್ಯಲೋಕೇ ॥ 2

ಅದರ ಕೊಂಬೆಗಳು ಕೆಳಕ್ಕೂ ಮೇಲಕ್ಕೂ ಹರಡಿಕೊಂಡಿರುವುವು (ಅಂದರೆ ಜೀವರು ಮೇಲಿನ ಮತ್ತು ಕೆಳಗಿನ ಜನ್ಮಗಳಲ್ಲಿರುವರು) ಅವು ಮೂರು ಗುಣಗಳಿಂದ ಮೈದುಂಬಿರುವುವು. ವಿಷಯ ಗಳೇ ಅದರ ಚಿಗುರುಗಳು ಭೂಲೋಕದಲ್ಲಿ ಪುಣ್ಯ ಪಾಪಕರ್ಮಗಳನ್ನು ಗಂಟುಬೀಳಿಸುವ (ಭಗವ ದಿಚ್ಛೆಯೆಂಬ) ಒಳಬೇರುಗಳು ಕೆಳಕ್ಕೂ ಮೇಲಕ್ಕೂ ಹೆಣೆದುಕೊಂಡೇ ಇರುವುವು.

ನ ರೂಪಮಸ್ಯೇಹ ತಥೋಪಲಭ್ಯತೇ
ನಾಂತೋ ನಚಾದಿರ್ನ ಚ ಸಂಪ್ರತಿಷ್ಠಾ ।
ಅಶ್ವತ್ಥಮೇನಂ ಸುವಿರೂಢಮೂಲಂ
ಅಸಂಗಶಸ್ತ್ರೇಣ ದೃಢೇನ ಛಿತ್ವಾ ॥ 3

ತತಃ ಪದಂ ತತ್ ಪರಿಮಾರ್ಗಿತವ್ಯಂ
ಯಸ್ಮಿನ್ ಗತಾ ನ ನಿವರ್ತಂತಿ ಭೂಯಃ ।
ತಮೇವ ಚಾದ್ಯಂ ಪುರುಷಂ ಪ್ರಪದ್ಯೇ
ಯತಃ ಪ್ರವೃತ್ತಿಃ ಪ್ರಸೃತಾ ಪುರಾಣೀ ॥ 4

ಈ ರೂಪವಾಗಲಿ, ಮೊದಲಾಗಲಿ ಕೊನೆಯಾ ಗಲಿ ನೆಲೆಯಾಗಲಿ ಇಲ್ಲಿ ಗೋಚರಿಸುವುದಿಲ್ಲ. ಚೆನ್ನಾಗಿ ಬೇರುಬಿಟ್ಟುಕೊಂಡಿರುವ ಇದನ್ನು ಒಳ್ಳೆ ಬಲವಾಗಿರುವ ವೈರಾಗ್ಯವೆಂಬ ಶಸ್ತ್ರದಿಂದ ಕತ್ತರಿಸಿ, ಆಮೇಲೆ ಯಾವ ಪದವಿಯನ್ನು ಪಡೆದವರು ಮತ್ತೆ ಹಿಂದಿರುಗುವುದಿಲ್ಲವೋ ಅಂಥ ಪರಮಪದ ವನ್ನು ಅನ್ವೇಷಿಸಬೇಕು. ಯಾವ ಪುರುಷನಿಂದ ಎಷ್ಟೋ ಹಿಂದಿನಿಂದ ಇದರ ಬೆಳವಣಿಗೆ ಹೊರ ಟಿತೋ, ಸೃಷ್ಟಿಗಿಂತ ಮೊದಲನೆಯವನಾದ ಆ ಪುರುಷನನ್ನು ಮರೆಹೋಗಬೇಕು.

ನಿರ್ಮಾನಮೋಹಾ ಜಿತಸಂಗದೋಷಾ
ಅಧ್ಯಾತ್ಮನಿತ್ಯಾ ವಿನಿವೃತ್ತಕಾಮಾಃ ।
ದ್ವಂದ್ವೈರ್ವಿಮುಕ್ತಾಃ ಸುಖದುಃಖಸಂಜ್ಞೈಃ
ಗಚ್ಛಂತ್ಯಮೂಢಾಃ ಪದಮವ್ಯಯಂ ತತ್ ॥5

ಹೆಮ್ಮೆಯೂ ಅವಿವೇಕವೂ ಇಲ್ಲದವರೂ ವಿಷ ಯಗಳ ಮೇಲಿನ ಪ್ರೀತಿಯ ದೋಷವನ್ನು ಗೆದ್ದ ವರೂ ಯಾವಾಗಲೂ ಬ್ರಹ್ಮವನ್ನೇ ಚಿಂತಿಸುವ ವರೂ, ಬಯಕೆಗಳನ್ನೆಲ್ಲ ಹಿಮ್ಮೆಟ್ಟಿಸಿದವರೂ, ಶೀತ ಉಷ್ಣ ಮೊದಲಾದ ದ್ವಂದ್ವಗಳನ್ನು ಕಳಚಿ ಕೊಂಡವರೂ ತಪ್ಪು ತಿಳಿಯದವರೂ ಆ ನಾಶ ರಹಿತವಾದ ಬ್ರಹ್ಮವನ್ನು ಪಡೆಯುತ್ತಾರೆ.



ನ ತದ್ಭಾಸಯತೇ ಸೂರ್ಯೋ
ನ ಶಶಾಂಕೋ ನ ಪಾವಕಃ ।
ಯದ್ಗತ್ವಾ ನ ನಿವರ್ತಂತೇ
ತದ್ಧಾಮ ಪರಮಂ ಮಮ ॥ 6

ಯಾವ ಸ್ಥಾನವನ್ನು ಪಡೆದ ಮೇಲೆ ಹಿಂದಕ್ಕೆ ಬರುವುದಿಲ್ಲವೋ ಅದನ್ನು ಸೂರ್ಯನು ಬೆಳಗುವ ದಿಲ್ಲ; ಚಂದ್ರನೂ ಬೆಳಗುವುದಿಲ್ಲ; ಅಗ್ನಿಯೂ ಬೆಳಗುವುದಿಲ್ಲ; ಅದು ನನ್ನ ಶ್ರೇಷ್ಠವಾದ ಸ್ಥಾನ.

ಮಮೈವಾಂಶೋ ಜೀವಲೋಕೇ
ಜೀವಭೂತಃ ಸನಾತನಃ ।
ಮನಃ ಷಷ್ಠಾನೀಂದ್ರಿಯಾಣಿ
ಪ್ರಕೃತಿಸ್ಥಾನಿ ಕರ್ಷತಿ 7

ಈ ಸಂಸಾರದಲ್ಲಿ ಬಹುಹಿಂದಿನಿಂದ ಇರುವ ಜೀವರೂಪವು ನನ್ನದೇ ಪ್ರತಿಬಿಂಬ. ಅವನು ತಮ್ಮ ತಮ್ಮ ಸ್ಥಳದಲ್ಲಿರುವ, ಮನಸ್ಸೇ ಆರನೆಯ ದಾದ ಇಂದ್ರಿಯಗಳನ್ನು ಸೆಳೆಯುತ್ತಾನೆ.

ಶರೀರಂ ಯದವಾಪ್ನೋತಿ
ಯಚ್ಚಾಪ್ಯುತ್ಕ್ರಾಮತೀಶ್ವರಃ ।
ಗೃಹೀತ್ವೈತಾನಿ ಸಂಯಾತಿ
ವಾಯುರ್ಗಂಧಾನಿವಾಶಯಾತ್ ॥ ೮

ಜೀವ ದೇಹವನ್ನು ಪಡೆದಾಗ ಮತ್ತು ದೇಹ ವನ್ನು ಬಿಟ್ಟು ಹೊರಡುವಾಗ ಗಾಳಿಯು ಹೂ ಗಳಿಂದ ಗಂಧವನ್ನು ಸೆಳೆಯುವಂತೆ ಈ ಇಂದ್ರಿಯ ಗಳನ್ನು ಸೆಳೆದುಕೊಂಡೇ ಭಗವಂತ ಜೀವನನ್ನು ಕೊಂಡೊಯ್ಯುತ್ತಾನೆ.

ಶ್ರೋತ್ರಂ ಚಕ್ಷುಃ ಸ್ಪರ್ಶನಂ ಚ
ರಸನಂ ಘ್ರಾಣಮೇವ ಚ ।
ಅಧಿಷ್ಠಾಯ ಮನಶ್ಚಾಯಂ
ವಿಷಯಾನುಪಸೇವತೇ ॥ 9

ಕಿವಿ, ಕಣ್ಣು, ಚರ್ಮ, ನಾಲಗೆ, ಮೂಗು ಮತ್ತು ಮನಸ್ಸನ್ನು ಆಶ್ರಯಿಸಿ ಜೀವನು ವಿಷಯಗಳನ್ನು ಭೋಗಿಸುತ್ತಾನೆ.

ಉತ್ಕ್ರಾಮಂತಂ ಸ್ಥಿತಂ ವಾಪಿ
ಭುಂಜಾನಂ ವಾ ಗುಣಾನ್ವಿತಮ್ ।
ವಿಮೂಢಾ ನಾನುಪಶ್ಯಂತಿ
ಪಶ್ಯಂತಿ ಜ್ಞಾನಚಕ್ಷುಷಃ ॥ 10

(ದೇಹವನ್ನು) ಬಿಟ್ಟೇಳುತ್ತಿದ್ದರೂ, ಇರುತ್ತಿದ್ದರೂ, ವಿಷಯಗಳನ್ನು ಭೋಗಿಸುತ್ತಿದ್ದರೂ, ಗುಣಗಳಿಂದ ಕೂಡಿದ್ದರೂ, ಅವನನ್ನು ಅವಿವೇಕಿ ಗಳು ನೋಡಲಾರರು. ತಿಳಿಗಣ್ಣಿನವರು ನೋಡು ತ್ತಾರೆ.

# ಭಗವಂತನ ಹೆಚ್ಚುಗಾರಿಕೆ

ಅಸದೃಶ ಕಾರ್ಯ ಸಾಹಸದಿಂದಲೂ, ಅತಿ ದಿವ್ಯ ದೇಹದಿಂದಲೂ ಕೂಡಿರುವ ಕೃಷ್ಣ ನನ್ನು ಆಸಮಯಕ್ಕೆ ತಕ್ಕಂತೆ ಸ್ತೋತ್ರಗ ಳಿಂದ ಕೂಡಿದ ತಮ್ಮ ಉಜ್ವಲ ಧ್ವನಿ ಯಿಂದ ಸೇವಿಸಿ, ದೇವತೆಗಳೆಲ್ಲರೂ ಸಾವ ಧಾನದಿಂದ ನೋಡುತ್ತಿರುವಾಗ, ಆ ಕಾಳಿಂಗ ಸರ್ಪವೂ ತನ್ನ ಪರಿವಾರದಿಂದ ಕೂಡಿ ಕೃಷ್ಣನನ್ನು ಬಹುಮುಖವಾಗಿ ಸ್ತೋತ್ರ ಮಾಡಿತು.

ನರಸಿಂಹಾವತಾರವನ್ನು ವರ್ಣಿಸುವಾಗ ಕವಿವರ್ಯರು "ಸಟಾಪಟಲ ಭೀಷಣೇ ಸ ರಭಸಾಟ್ಟಹಾಸೋದ್ಭಟೇ'' ಎಂದಿದ್ದಾರೆ. ಹಾಗೆಯೇ ಚಂದ್ರೋದಯವನ್ನು ಬಹು ಸೊಗಸಾಗಿ ವರ್ಣಿಸಿದ್ದಾರೆ.

ತಲೇ ಷ್ವನೇಕಂತ ಮಹೀರುಹಾಣಾಂ
ಛಾಯಾಸ್ತದಾ ಮಾರುತ
ಕಂಪಿತಾನಾಂ ।
ಶಶಾಂಕ ಸಿಂಹೇನ ತಮೋಗಜಾನಾಂ
ಲೂನಾಕೃತೀನಾಮಿವ ಗಾತ್ರಖಂಡಾಃ॥

ಚಂದ್ರೋದಯ ಕಾಲದಲ್ಲಿ ಗಾಳಿಯಿಂದ ಚಂಚಲವಾದ ಮರದ ಕೊಂಬೆಗಳ ನೆರಳು ನೆಲದಲ್ಲಿ ಚಂಚಲವಾಗಿ ಚಂದ್ರನೆಂಬ ಸಿಂಹ ದಿಂದ ಕೊಲ್ಲಲ್ಪಟ್ಟ ಅಂಧಕಾರವೆಂಬ ಆನೆಯ ಆಕಾರಭಂಗದಿಂದ ಉಂಟಾದ. ಆಕ್ಷಣ ದಲ್ಲಿಯೇ ಓಡಾಡುತ್ತಿರುವ ದೇಹದ ಖಂಡ ಗಳೋ ಎಂಬಂತೆ ತೋರುತ್ತಿದ್ದುವು.

ದಿವ್ಯ ಪ್ರೇಮಿಯಾದ ಶ್ರೀಕೃಷ್ಣನಲ್ಲಿ ಅವ ರಿಗಿರುವ ಉತ್ಕಟ ಪ್ರೇಮವನ್ನು ಕಾವ್ಯ ದಲ್ಲಿ ವಿವರಿಸಲಾಗಿದೆ. ಸಂಸ್ಕೃತ ಸಾಹಿತ್ಯ ದಲ್ಲಿ ಸಾಮಾನ್ಯವಾಗಿ ಪ್ರಿಯ ಪ್ರೇಯಸೀ ಭಾವನೆಯನ್ನು ವ್ಯಕ್ತಪಡಿಸುವ ಕಾವ್ಯಗಳು ಅನೇಕವೆಂದು ವಿಮರ್ಶಕರು ಅಭಿಪ್ರಾಯ ಪಟ್ಟಿದ್ದಾರೆ. ಪ್ರಸಿದ್ಧ ವಿಮರ್ಶಕರಾದ ಅಪ್ಪಯ್ಯ ದೀಕ್ಷಿತರು "ತತ್ರ ವೀರರಸ ಪ್ರಧಾನ ಭೂತಃ ಭೂಭಾರಾವತರಣ ಅರ್ಥ ತ್ವಾದವತಾರಸ್ಯಃ'' ಎಂದು ಹೇಳಿದ್ದಾರೆ. ಈ ಕಾವ್ಯದಲ್ಲಿ ಶ್ರೀಕೃಷ್ಣನ ಪಾತ್ರವು ಶ್ರೀ ವೈಷ್ಣವ ಧರ್ಮದ ಪರವಾಗಿದೆ. ಈ ಭಾವ ನೆಯನ್ನು ವ್ಯಕ್ತಪಡಿಸುವುದೇ ಕವಿಯ ಆಶಯವಾಗಿದೆ.

ಏಕೀ ಭವದ್ಭಿರಯುತೈರಪಿ
ಮನ್ಮಥಾನಾಂ
ಯತ್ಕಾಂತಿ ಸಿಂಧು ಪೃಷತಾನು
ಕೃತಿರ್ನ ಶಕ್ಯಾ ।
ಸುಪ್ರೇಕ್ಷ್ಯ ತಂ ಯದುಪತಿಂ
ಯಮಿನೋಪಿ ನೂನಂ
ಸ್ತ್ರೀಭಾವಮೇವ ಮನಸಾ
ಬಿಭರಾಂಬಭೂವುಃ ॥

ಹತ್ತುಸಾವಿರ ಮನ್ಮಥರೂಪ ಏಕೀಭವಿಸಿ ತಮ್ಮ ಸೌಂದರ್ಯವನ್ನು ಪ್ರಕಟಿಸಿದರೂ ಯಾವ ಯದುಪತಿಯಾದ ಕೃಷ್ಣನ ಕಾಂತಿ ಸಮುದ್ರದ ಒಂದು ಬಿಂದುವನ್ನು ಅನು ಕರಿಸಲು ಸಾಧ್ಯವಿಲ್ಲವೋ ಅಂತಹ ಕೃಷ್ಣ ನನ್ನು ನೋಡಿ ಅವನನ್ನು ಅನುಭವಿಸುವ ತ್ವರೆಯಿಂದ ಜಿತೇಂದ್ರಿಯರಾದ ಋಷಿಗಳು ಮನಸ್ಸಿನಿಂದಲೇ ತಾವು ಸ್ತ್ರೀಯರೆಂಬ ಭಾವನೆಯನ್ನು ತಳೆದರು.

ಅತ್ಯಂತ ಸುಂದರನೂ, ಅತ್ಯಾನಂದ ಕರನೂ, ಸ್ವರ್ಗಸುಖ ಸ್ವರೂಪನೂ ಆದ ಶ್ರೀಕೃಷ್ಣನ ಮೇಲೆ ಉಪಾಸಕನಿಗಿರುವ ದಿವ್ಯ ಪ್ರೇಮಭಾವನೆಯನ್ನು, ಪ್ರೇಯಸಿಗೆ ಪ್ರಿಯನ ಮೇಲಿರುವ ಅನುಪಮರೀತಿಯ ಪ್ರೇಮಕ್ಕೆ ಹೋಲಿಸಲಾಗಿದೆ. ಕವಿಶ್ರೇಷ್ಠರ ಮನೋಭಾವನೆಯು ಸಮಗ್ರಕಾವ್ಯದಲ್ಲಿ ಪ್ರತಿಧ್ವನಿ ಕೊಡುತ್ತದೆ. ಕಾವ್ಯದ ಪ್ರಥಮ ಶ್ಲೋಕವೇ ಈ ಭಾವನೆಯಿಂದ ಕೂಡಿದೆ.

ವಂದೇ ವೃಂದಾವನ ಚರಂ
ವಲ್ಲವೀ ಜನವಲ್ಲಭಮ್ ।
ಜಯಂತೀ ಸಂಭವಂ ಧಾಮ
ವೈಜಯಂತೀ ವಿಭೂಷಣಮ್ ॥

ವೃಂದಾವನ ಸಂಚಾರಿಯೂ, ಗೋಪಿಕಾ ಸ್ತ್ರೀಯರ ಪ್ರಿಯನೂ, ವೈಜಯಂತಿ ಎಂಬ ಮಾಲಿಕೆಯನ್ನು ಆಭರಣವಾಗಿ ಧರಿಸಿರುವ ವನೂ, ಮತ್ತು ಜಯಂತಿ ದಿನದಲ್ಲಿ ಅವತರಿಸಿರುವವನೂ ಆದ ಕೃಷ್ಣನನ್ನು ವಂದಿಸುತ್ತೇನೆ. ಸಿಂಹಮಾಸದ ಬಹುಳ ಅಷ್ಟಮಿಯನ್ನು ಜಯಂತಿ ಎಂದು ಸ್ಮೃತಿಕಾರರು ಹೇಳಿದ್ದಾರೆ.

ಕವಿವರ್ಯರು ಮುಂದೆ ವಿವರಿಸಲಿರುವ ಮಧುರವಾದ ಮತ್ತು ಧಾರ್ಮಿಕ ಗಾನಾನುಗುಣವಾದ ಪ್ರೇಮದ ಇತಿಹಾಸಕ್ಕೆ ಇದು ನಾಂದಿ ಶ್ಲೋಕ. ಶ್ರೀಕೃಷ್ಣನ ಅನಂತ ಕಲ್ಯಾಣಗುಣಸಂಪೂರ್ಣವೈಭವವನ್ನು ಚಿತ್ರಿಸುವುದಕ್ಕೆ ಕವಿವರ್ಯರು ಮಹದಾನಂದ ಹೊಂದುತ್ತಿದ್ದುದು ಇಲ್ಲಿ ಚೆನ್ನಾಗಿ ವೇದ್ಯವಾಗುತ್ತದೆ. ಪರಮಾತ್ಮನು ಜಗತ್ಪ್ರೇಮರೂಪಿ ಎಂಬುದನ್ನು "ವಲ್ಲವೀಜನ ವಲ್ಲಭಂ"॥ ಎಂದಿದ್ದಾರೆ. "ಜಗತ್ಪ್ರೇಮ ವಿಲ್ಲದ ಪರಮಾತ್ಮನು ದೇವರಲ್ಲ" ಎಂಬುದು ಕವಿವರ್ಯರ ಅಭಿಪ್ರಾಯ. "ವೃಂದಾವನ ಚರಂ" ಎಂಬ ಶಬ್ದಗಳ ಕಲ್ಪನೆ ದಿವ್ಯೋದ್ಯಾನದಲ್ಲಿರುವ ದಿವ್ಯಸ್ವರೂಪಿಯಾದ ಪರಮಾತ್ಮನು ಮಾನವನ ಕಡೆಗೆ ಇಳಿದು ಬರುತ್ತಾನೆಂತಲೂ, ಮಾನವನು ಪರಮಾತ್ಮನ ಕಡೆಗೆ ಏರಿ ಹೋಗುವನೆಂದೂ ಆಗಿದೆ.

ಯಾದವಾಭ್ಯುದಯ ಕಾವ್ಯದಲ್ಲಿ ಕಾಣುವ ಶೃಂಗಾರ ರಸವು ಅದ್ವಿತೀಯ ರೀತಿಯದು. ರಕ್ತಮಾಂಸದಿಂದ ಕೂಡಿದ ದೇಹಕ್ಕೆ ಸಂಬಂಧ ಪಟ್ಟಂತೆ ಇಲ್ಲದಿದ್ದರೂ ಇಲ್ಲಿನ ಶೃಂಗಾರ ರಸವು ಪ್ರೇಮ ಭಾವನೆಯಿಂದ ಕೂಡಿದ ಚಿತ್ತವೃತ್ತಿಯನ್ನು ರೋಮಾಂಚಕರ ರೀತಿಯಲ್ಲಿ ವಿವರಿಸುತ್ತದೆ. ಕವಿವರ್ಯರು ಪರಮಾತ್ಮನೊಡನೆ ಸೇರುವ ತಮ್ಮ ಇಚ್ಛೆಯನ್ನು ಹೀಗೆ ವ್ಯಕ್ತ ಪಡಿಸಿದ್ದಾರೆ.

ಅಪಿ ನಾಮ ನಿಶಾಮಯಿಷ್ಯತೇ
ನಿಗಮಾಂತೈರಿವ ನಿರ್ಮಿತಾ ಸ್ಥಲೀ।
ರಮಯಿಷ್ಯತಿ ಯತ್ರ ಮೇ ದೃಶಾ
ರಸಭೂಮಾ ರಮಣೀಯ ಮಾತೃಕಾ ॥

ಯಾವ ದಿವ್ಯಭೂಮಿಯಲ್ಲಿ (ಅಪ್ರಾಕೃತ ಸ್ಥಾನ) ಸರ್ವರಸ ಘನವಾಗಿರುವ ಭಗವಂತನ ದಿವ್ಯಮಂಗಳಮೂರ್ತಿಯು ಈ ನನ್ನ ಕಣ್ಣುಗಳನ್ನು ಸಂತೋಷಪಡಿಸ ಬಹುದೋ ಅಂತಹ ಉಪನಿಷನ್ಮಯವಾದ ಮತ್ತು ಉಪನಿಷತ್ತುಗಳಿಂದಲೇ ನಿರ್ಮಿತವಾಗಿದೆಯೋ ಎಂಬಂತಿರುವ ಅಪ್ರಾಕೃತ ಸ್ಥಾನವನ್ನು ನಾನು ನೋಡಿಯೇನೆ?

ವೇದಾಂತ ದೇಶಿಕರು ಪರಮಾತ್ಮನ ಸಾನ್ನಿಧ್ಯ ಪಡೆಯಬೇಕೆಂಬ ತಮ್ಮ ಇಚ್ಛೆ ಪ್ರಬಲವಾದಂತೆ ಮತ್ತು ಪರಮಾತ್ಮನ ಸಾಮೀಪ್ಯ ದೊರೆಯುವುದೆಂಬ ನಿರೀಕ್ಷೆ ಕರಗತವಾಗುವುದೆಂಬ ಭಾವನೆ ಮೂಡಿದಂತೆ, ಜೊತೆಯಲ್ಲಿಯೇ ವಿರಹ ಅಥವಾ ದುಃಖ ಉಂಟಾಗುವುದೆಂದು ಭಾವಿಸುತ್ತಾರೆ. ಪರಮಾತ್ಮನು ತಮ್ಮ ದಿವ್ಯ ಪ್ರೇಮಕ್ಕೆ ಸಿಲುಕಲಾರನೋ ಅಥವ ತಮ್ಮ ಮಟ್ಟಕ್ಕೆ ಇಳಿಯಲಾಗದಷ್ಟು ಉನ್ನತಿಯಲ್ಲಿರುವನೋ ಎಂಬ ಕಲ್ಪನೆ ಅವರಿಗೆ ಉಂಟಾಗುವುದು. ನಂತರ ಆನಂದಪರಿಪೂರ್ಣರಾಗಿ ಪರಮಾತ್ಮನ ಸಾಮೀಪ್ಯ ಸೂಚಿತವಾಯಿತೋ ಎನ್ನುವಂತೆ ದಿವ್ಯಪ್ರೇಮಿಯಾದ ಶ್ರೀಕೃಷ್ಣನ ಕ್ಷಣದರ್ಶನವನ್ನು ಹೊಂದುವರು ಈ ಅನುಭವದ ವರ್ಣನೆಯನ್ನು ಹೀಗೆ ಹೇಳಿದ್ದಾರೆ.

ಅತಿ ರೋಧಿ ರಸೌ ನಿಧಿಃ ಶ್ರುತೇಃ
ಅನಿಮೇಷ ವ್ರತದರ್ಶಿನೀ ದೃಶೋಃ।
ತನುತೇ ತನುರೀಶ ತಾವಕೀ
ಸ್ಮರಣಂ ವಿಸ್ಮರಣಂ ಚ ದುಃಖಕಮ್ ॥

ಪ್ರಭುವೇ! ನನ್ನ ಕಣ್ಣುಗಳಿಗೆ ರೆಪ್ಪೆ ಮುಚ್ಚದಿರುವ ಈ ವ್ರತವನ್ನು ಉಪದೇಶಿಸುತ್ತಿರುವ ಮುಚ್ಚಳವಿಲ್ಲದ ವೇದನಿಧಿಯೇ ಆಗಿರುವ ನಿನ್ನ ಈ ದಿವ್ಯ ಮಂಗಳ ವಿಗ್ರಹವು ದುಸ್ಸಹವಾದ ಸ್ಮರಣೆಯನ್ನೂ, ವಿಸ್ಮರಣವನ್ನೂ ಉಂಟುಮಾಡುತ್ತದೆ. ಮನಸ್ಸಿಗೆ ಇತರ ಹವ್ಯಾಸವಿಲ್ಲದಿರುವಾಗ ಒಮ್ಮೆ ಸ್ಮರಣವೂ, ಇನ್ನೊಮ್ಮೆ ವಿಸ್ಮರಣವೂ ನನ್ನನ್ನು ಬಾಧಿಸುತ್ತವೆ.

ಕವಿವರ್ಯರು ತಮ್ಮ ದಿವ್ಯ ಪ್ರೇಮವು ಪರಮಾತ್ಮನನ್ನು ಪಡೆಯಬೇಕೆಂಬ ಉತ್ಕಟೇಚ್ಛೆಯು ನಿರಾಶೆಯಲ್ಲಿ ಅಂತ್ಯವಾಗುವುದೆಂದು ಯೋಚಿಸುತ್ತಿರುವಾಗಲೇ ಅವರಿಗೆ ಪರಮಾತ್ಮನ ಅನಂತ ಕಲ್ಯಾಣಗುಣಗಳಲ್ಲಿ ನಂಬಿಕೆ ದೃಢವಾಗುವುದು. ಆ ದಿವ್ಯ ಪ್ರೇಮಸ್ವರೂಪನು ಅನುಗ್ರಹಿಸುವನೆಂಬ ಅವನ ಸಂಕಲ್ಪವು ಅವರ ಜ್ಞಾನಕ್ಕೆ ಬರುವುದು. ಇಂತಹ ಭಾವನೆಯ ಪರಿಣಾಮವಾಗಿ ತಮ್ಮ ರಾಧಾನಟನೆಯಲ್ಲಿ ಪರಮಾತ್ಮನ ಸಾನ್ನಿಧ್ಯವನ್ನು ಅನುಭವಿಸುವರು.

ಕರುಣಾ ಧರಿತ್ರ್ಯೈಃ ಕದಾ ಪುನಃ
ಸ್ವಯಮುಲ್ಲಾಘಯಿತಾ ಸ ಏಷ।
ಅಪರಸ್ಪರ ಪಾತಿಭಿಃ ಶನೈ
ರಗದಂಕಾರ ನಿಜೈರಪೇಕ್ಷಣೈಃ ॥

ಮಿಥೋ ಗುಣೈಸ್ತನ್ಮಿಥುನಂ ನಿಬದ್ಧಂ
ನಿಯೋಗ ವೈದೇಶಿಕ ಸಂಪ್ರಯೋಗಮ್
ಅಜಾಯತೋಽನ್ಯೋಽನ್ಯ ನಿಲೀನಭಾವಂ
ಸಖೀಧೃತಾಂ ಸಾದರದರ್ಶನೀಯಮ್ ॥

ನಿರುಪಾಧಿಕ ಕೃಪೆಯಿಂದ ಕೂಡಿ ಏಕಕಾಲದಲ್ಲಿ ಮೆಲ್ಲಗೆ ಪ್ರವಹಿಸುವ ಸಂಸಾರಕ್ಕೆ ಔಷಧಿಯಂತಿರುವ ಕಟಾಕ್ಷಗಳಿಂದ ಅವನೇ ನನ್ನನ್ನು ನಿರೋಗಿಯನ್ನಾಗಿ ಮಾಡಬೇಕು. ಅದು ಯಾವಾಗಲೋ ತಿಳಿಯದು.

ಲಕ್ಷ್ಮೀನಾರಾಯಣರೆಂಬ ದಿವ್ಯ ದಂಪತಿಗಳು, ಪರಸ್ಪರ ಅನುಗುಣವಾದ ಗುಣಗಳಿಂದ ಹೆಣೆಯಲ್ಪಟ್ಟು ವಿಯೋಗವಿಲ್ಲದಿರುವ ನಿತ್ಯಸಂಬಂಧವುಳ್ಳವರಾಗಿ ತಮ್ಮ ತಮ್ಮಲ್ಲೇ ಅಡಗಿರುವ ಪರಸ್ಪರ ಭಾವದಿಂದ ಕೂಡ ಸುಖಕರವಾದ ನೇತ್ರಗಳಿಂದ ಆದರದ ನಿರೀಕ್ಷಣೆಗೆ ಅರ್ಹವಾಗುವಂತೆ ಸ್ವಸಂಕಲ್ಪದಿಂದಲೇ ಸೇರಿಕೊಂಡು ಆಗಿದ್ದಾರೆ.

ಕವಿ ಸಾರ್ವಭೌಮರಾದ ವೇದಾಂತ ದೇಶಿಕರ ಮೇಲೆ ಪ್ರಬಲವಾದ ಎರಡು ಪರಿಣಾಮಕಾರಿ ಪ್ರಭಾವಗಳಿದ್ದುವು. ಒಂದನೆಯದು ಕವಿ ಕಾಳಿದಾಸನ ಕೃತಿಗಳು ಮತ್ತು ಅವುಗಳ ನಿರಂತರ ವ್ಯಾಸಂಗ, ಎರಡನೆಯದು ಪರಮಯೋಗಿಗಳಾದ ನಮ್ಮಾಳ್ವಾರ್ ಅವರ ದಿವ್ಯಪ್ರಬಂಧಗಳ ಮೇಲೆ ಅವರಿಗಿದ್ದ ಪ್ರೀತಿ ವಿಶ್ವಾಸ. ಕಾಳಿದಾಸನು ಇವರಿಗೆ ವಿಷಯ ಮತ್ತು ಭಾವನೆಯ ಜ್ಞಾನವನ್ನುಂಟು ಮಾಡಿದ್ದರೆ, ನಮ್ಮಾಳ್ವಾರ್ ಅವರು ದೈವ ಪ್ರೇರಣೆಯನ್ನೂ ಮತ್ತು ಸೂಕ್ಷ್ಮ ಪರಿ

ಜ್ಞಾನವನ್ನೂ ಉಂಟು ಮಾಡಿದ್ದರು. ಕವಿ ರತ್ನ ಕಾಳಿದಾಸನು ಇಲ್ಲದೇ ಇದ್ದಿದ್ದರೆ, ವೇದಾಂತ ದೇಶಿಕರು ಕವಿ ಶ್ರೇಷ್ಠರೆನ್ನಿಸಿ ಕೊಳ್ಳುತ್ತಿದ್ದರೋ ಇಲ್ಲವೋ ತಿಳಿಯದು. ಹಾಗೆಯೇ ನಮ್ಮಾಳ್ವಾರರು ಇಲ್ಲದೇ ಇದ್ದಿದ್ದರೆ ವೇದಾಂತ ದೇಶಿಕರು ರಾಮಾನುಜ ಸಿದ್ಧಾಂತ ನಿರ್ಧಾರಣ ಸಾರ್ವಭೌಮರಾಗುತ್ತಿರಲಿಲ್ಲವೋ ಏನೋ!

ವೇದಾಂತ ದೇಶಿಕರ ಕಾವ್ಯಾಭಿರುಚಿಯು ನಾರೀಕೇಳ ಪಾಕವಂತೆ ಅದರ ಕಾವ್ಯ ಸಂಪತ್ತಿನ ಸ್ವಾದವನ್ನು ಅನುಭವಿಸ ಬೇಕಾದರೆ ಅದನ್ನು ಚೆನ್ನಾಗಿ ಆಲೋಚಿಸಿ ವ್ಯಾಸಂಗ ಮಾಡಬೇಕು. ಅವರ ಕಾವ್ಯವನ್ನು ಬಹುವಾಗಿ ಮೆಚ್ಚಿ ಪ್ರಶಂಸ ಮಾಡಿರುವ ಅಪ್ಪಯ್ಯ ದೀಕ್ಷಿತರು ನಮಗೆ ಮಾರ್ಗದರ್ಶಕರಾಗಿದ್ದಾರೆ, ಪ್ರತಿಭಾವಂತ ಪ್ರಸಿದ್ಧ ಸಂಸ್ಕೃತ ಕವಿಶ್ರೇಷ್ಠರ ಶ್ರೇಣಿಯಲ್ಲಿ ವೇದಾಂತ ದೇಶಿಕರ ಸ್ಥಾನವನ್ನು ಗೊತ್ತು ಮಾಡುವುದು ಬಹು ಕಷ್ಟ. ಸಂಸ್ಕೃತ ಸಾಹಿತ್ಯದಲ್ಲಿ ಮತ್ತು ತಮಿಳು ದಿವ್ಯ ಪ್ರಬಂಧಗಳಲ್ಲಿ ವೇದಾಂತ ದೇಶಿಕರ ಸ್ಥಾನ ಹೋಲಿಕೆ ಇಲ್ಲದ್ದು. ಕಾವ್ಯಪ್ರಪಂಚದಲ್ಲಿಯೂ ಸಹ ಅವರ ಸ್ಥಾನ ಅತ್ಯಂತ ಹಿರಿದು. ಇಷ್ಟರಿಂದಲೇ ನಾವು ತೃಪ್ತರಾಗಬೇಕೇ ವಿನಹ ಅವರ ಕೃತಿಗಳ ಪರಿಮಿತಿಯನ್ನು ಗೊತ್ತು ಹಚ್ಚುವುದು ಅಸಾಧ್ಯ.

ಯಾದವಾಭ್ಯುದಯ ಕಾವ್ಯದಲ್ಲಿ ನಿಖಿಲ ಲೋಕಗಳ ಸೃಷ್ಟಿಸ್ಥಿತಿ ಲಯಗಳ ಏಕಮಾತ್ರಧುರಂಧರನಾಗಿ, ಸರ್ವದಾ ಪರಮ ಜಾಗೃತನೂ, ಲೀಲಾಮಾನುಷವಿಗ್ರಹನೂ, ಆರ್ಯಾವರ್ತದ ಸಾರ್ವಭೌಮನೂ ಆದಕಾರಣ, ಅಂತಃಪುರದಲ್ಲಿ ನಿದ್ರಾವ್ಯಾಜವಲ್ಲಿರುವ ಸ್ವಾಮಿಯನ್ನು ಎಬ್ಬಿಸಲು ವಂದಿಮಾಗಧರು ಬೆಳಗಿನ ಜಾವದಲ್ಲಿ ಗಾನಮಾಡುವ ಸುಪ್ರಭಾತವು ಅತಿಮನೋಹರವಾಗಿದೆ. ಮುಂಜಾನೆಯ ಅರುಣೋದಯದಿಂದ ಪ್ರಾತಃಕಾಲದ ಸೂರ್ಯೋದಯದವರೆಗೆ ಪ್ರಕೃತಿಯಲ್ಲಿ ಕಾಣಬರುವ ನಯನಮನೋಹರವಾದ ಮತ್ತು ಮನಮೋಹಕವಾದ ಸಮಸ್ತ ವಿಷಯಗಳನ್ನು ವೇದಾಂತ ದೇಶಿಕರು ಮಾನವನಿಗೆ ಅಸಾಧ್ಯವಾದ ಮತ್ತು ಅಶ್ವಿನೀ

(32ನೇ ಪುಟ ನೋಡಿ)

# ಶ್ರೀ ಕೃಷ್ಣನ ಜನ್ಮಲೀಲಾ ರಹಸ್ಯ

ಸೃಷ್ಟಿಕರ್ತನಾದ ಚತುರ್ಮುಖ ಬ್ರಹ್ಮನ ದಿವಾಭಾಗದಲ್ಲಿ ಸಪ್ತಮ ಮನ್ವಂತರವಾದ ವರ್ತಮಾನದ ವೈವಸ್ವತ ಮನ್ವಂತರದ ಇಪ್ಪತ್ತೆಂಟನೆಯ ದ್ವಾಪರಯುಗದ ಅಂತ್ಯದಲ್ಲಿ ನಡೆದ ಘಟನೆ; ಅಸುರ ಭಾವಯುಕ್ತರಾದ ಕಂಸ, ಜರಾಸಂಧ, ಕೇಶಿ, ಧೇನುಕ, ಪ್ರಲಂಬ, ನರಕ, ಬಾಣ ಮೊದಲಾದ ಮಹಾಬಲಶಾಲಿಗಳಾದ ದೈತ್ಯರಿಂದ ಪೀಡಿತಳಾದ ಪೃಥಿವೀದೇವಿಯು ಭಾರಾಕ್ರಾಂತಳಾದಳು. ಸ್ವಾರ್ಥಪೂರ್ಣರಾದ ಈ ಅಸುರರು ಪರಪೀಡನೆ, ಧಾರ್ಮಿಕರ ಅವಮಾನ, ಧರ್ಮವಿನಾಶ, ಅಧರ್ಮಾಚರಣೆಗಳನ್ನೇ ತಮ್ಮ ಜೀವನದ ವ್ರತವಾಗಿ ಹಿಡಿದಿದ್ದರು. ಭಗವದ್ಭಕ್ತಿಹೀನರೂ, ಸ್ವಾರ್ಥಾಂಧರೂ ಆದ ಈ ಅಸಂಖ್ಯ ಅಸುರರ ಭಾರವನ್ನು ಸಹಿಸಲು ಅಕ್ಷಮಳಾದ ಧರಣೀದೇವಿಯು ಗೋರೂಪವನ್ನು ಧರಿಸಿ ಬ್ರಹ್ಮದೇವನಲ್ಲಿಗೆ ತೆರಳಿ ತನ್ನ ದುಃಖವನ್ನು ನಿವೇದಿಸಿದಳು. ಸೃಷ್ಟಿಕರ್ತನಾದ ಬ್ರಹ್ಮನು ದುಷ್ಟರಾದ ಅಸುರರನ್ನು ಸೃಷ್ಟಿ ಮಾಡಿದುದಕ್ಕಾಗಿ ಪೃಥಿವೀದೇವಿಯು ತನ್ನ ಅಸಮಾಧಾನವನ್ನು ವ್ಯಕ್ತಗೊಳಿಸಿದಳು. ಸುಮೇರು, ಹಿಮಾಚಲ, ವಿಂಧ್ಯಾಚಲ ಮೊದಲಾದ ಮಹಾಪರ್ವತಗಳ ಭಾರವನ್ನು ಭೂಮಾತೆಯು ಲೀಲಾಜಾಲವಾಗಿ ಸಹಿಸಿದರೂ ಅಭಕ್ತರೂ, ನಾಸ್ತಿಕರೂ, ದುಷ್ಟರೂ ಆದವರ ಭಾರವನ್ನು ಸಹಿಸಲಾರದವಳಾಗಿರುವಳು. ಪೃಥಿವಿಯ ಕಾತರೋಕ್ತಿಯನ್ನು ಕೇಳಿದ ಬ್ರಹ್ಮನು ಈ ವಿಧವಾಗಿ ತಿಳಿಸಿದನು—"ಹೇ ಪೃಥಿವೀದೇವಿ, ಈ ವಿಷಯದಲ್ಲಿ ನನ್ನದೇನೂ ದೋಷವಿರುವುದಿಲ್ಲ. ಭಗವಂತನ ಇಚ್ಛೆಗೆ ಅಧೀನನಾಗಿ ನಾನು ಕೇವಲ ನಿಮಿತ್ತನಾಗಿ ಮಾಯಾಬದ್ಧ ಜೀವರ ಶರೀರಗಳನ್ನು ಸೃಷ್ಟಿಸುತ್ತೇನೆ. ಜೀವಾತ್ಮರು ತಮ್ಮ ತಮ್ಮ ಕರ್ಮಫಲಗಳಿಗೆ ಅನುಗುಣವಾದ ಶರೀರಗಳನ್ನು ಪಡೆಯುತ್ತಾರೆ ಅವರ ಪಾಪ–ಪುಣ್ಯಗಳಿಗೆ ನಾನು ಹೊಣೆಗಾರನಾಗಿರುವುದಿಲ್ಲ. ಇದರಿಂದಾಗಿ ನಿನ್ನ ಭಾರಹರಣವೂ ನನ್ನ ಕಾರ್ಯವಾಗಿರುವುದಿಲ್ಲ. ಸಮಸ್ತ ಜಗತ್ತಿನ ಪಾಲಕನಾದ ಶ್ರೀಹರಿಯೇ ಅಸುರರನ್ನು ಸಂಹಾರಗೊಳಿಸಿ ನಿನ್ನನ್ನು ಪಾಲಿಸಬಲ್ಲನು. ಈ ಸಮಯದಲ್ಲಿ ನಾವೆಲ್ಲರೂ ಭಗವಾನ್ ವಿಷ್ಣುವಿನಲ್ಲಿಗೆ ತೆರಳಿ ನಿನ್ನ ದುಃಖವನ್ನು ನಿವೇದಿಸಿ ಅದರ ಉಪಶಮನದ ಸಲುವಾಗಿ ಪ್ರಾರ್ಥಿಸುವಾ".

ಭೂದೇವಿಗೆ ಈ ವಿಧವಾಗಿ ಸಾಂತ್ವನೆಯನ್ನು ನೀಡಿ ಬ್ರಹ್ಮದೇವನು ರುದ್ರದೇವನನ್ನೂ, ಇಂದ್ರಾದಿ ದೇವತೆಗಳನ್ನೂ ಕೂಡಿಕೊಂಡು ಬ್ರಹ್ಮಾಂಡಪಾಲಕನಾದ ವಿಷ್ಣುವಿನಲ್ಲಿ ಧರಣಿಯ ದುರವಸ್ಥೆಯನ್ನು ನಿವೇದಿಸುವ ಸಲುವಾಗಿ ಕ್ಷೀರಸಾಗರದ ತೀರಪಕ್ಕೆ ಬಂದು ಉಪಸ್ಥಿತನಾದನು. ಭೂದೇವಿಯೂ ಅವರೊಡನೆ ನಡೆದಳು. ದೇವತೆಗಳೆಲ್ಲರೂ ಭಗವಂತನ ಕೃಪೆಗಾಗಿ ನಿರೀಕ್ಷಿಸುತ್ತಿದ್ದಂತೆ ವೇದಜ್ಞನಾದ ಚತುರಾನನನು ಪುರುಷಸೂಕ್ತ ಮಂತ್ರವನ್ನು ಉಚ್ಚರಿಸುತ್ತ ದೇವದೇವೇಶ್ವರನೂ, ಸಚ್ಚಿದಾನಂದ ವಿಗ್ರಹನೂ ಆದ ವಿಷ್ಣುವಿನ ಆರಾಧನೆಯಲ್ಲಿ ತೊಡಗಿದನು ತನ್ನ ಅಷ್ಟಲೋಚನಗಳನ್ನು ಮುದ್ರಿಸಿ ಭಕ್ತಿಪೂರ್ವಕವಾಗಿ ಧ್ಯಾನಮಗ್ನನಾದ ಬ್ರಹ್ಮನು ಭಗವಂತನ ಆದೇಶವನ್ನು ಸಮಾಧಿಯಲ್ಲಿ ಪಡೆದು ಅದನ್ನು ದೇವತೆಗಳಿಗೂ, ಭೂದೇವಿಗೂ ತಿಳಿಸಿದನು. "ಕ್ಷೀರಾಬ್ಧಿಶಾಯಿಯಾದ ವಿಷ್ಣುವಿಗೆ ಮೂಲಪುರುಷನಾದ ಸ್ವಯಂ ಭಗವಂತನು ಮಹಾವೈಕುಂಠವಾದ ಗೋಲೋಕದಿಂದ ಸ್ವಲ್ಪಕಾಲದಲ್ಲಿಯೇ ಅವತರಣವನ್ನು ಗೈದು ಭೂಮಿಯಲ್ಲಿ ಪ್ರಕಟನಾಗುವನು. ಲೀಲಾಮಯನಾದ ಭಗವಂತನು ತನ್ನ ಮಾಧುರ್ಯಮಯವಾದ ಅದ್ಭುತ ಲೀಲೆಗಳನ್ನು ಜಗತ್ತಿನಲ್ಲಿ ಪ್ರಕಟಿಸಿ ಭಕ್ತರಾದವರನ್ನು ಆನಂದಪಡಿಸುವನಲ್ಲದೆ ಸಮಸ್ತ ದುಷ್ಟರನ್ನು ನಿಗ್ರಹಿಸುವನು" ಭಗವಾನ್ ಶ್ರೀಕೃಷ್ಣನ ಉದ್ದೇಶವಾಗಿಯೇ ಶ್ರೀ ಶುಕದೇವರು ಎಂದಿರುವರು— "ಕೃಷ್ಣಸ್ತು ಭಗವಾನ್ ಸ್ವಯಂ". ಪೃಥಿವೀದೇವಿಯ ಸೌಭಾಗ್ಯಕ್ಕೆ ಮಿತಿಯಿರಲಿಲ್ಲ. ಪರಿಪೂರ್ಣತತ್ತ್ವವಾದ ಶ್ರೀಕೃಷ್ಣನು ಗೋಲೋಕ ವೈಕುಂಠದಿಂದ ಪ್ರಪಂಚಕ್ಕೆ ಅವತರಿಸುವುದು ಮಹತ್ತರವಾದ ಘಟನೆಯಾಗಿದೆ. ಏಕೆಂದರೆ ಇತರ ಅವತಾರಗಳು ಪ್ರತಿಯುಗಗಳಲ್ಲೂ ಪ್ರಪಂಚದಲ್ಲಿ ಪ್ರಕಟವಾದರೂ ಗೋಲೋಕವಿಹಾರಿಯಾದ ನಂದನಂದನನು ಬ್ರಹ್ಮನ ಪ್ರತಿಯೊಂದು ದಿನದಲ್ಲಿ ಕೇವಲಮಾತ್ರವಾಗಿ ಒಂದು ಬಾರಿಯಾಗಿ ಈ ಜಗತ್ತಿನಲ್ಲಿ ಅವತರಿಸುವನು. ಬ್ರಹ್ಮನ ಒಂದುದಿನವೆಂದರೆ ಸಹಸ್ರ ಚತುರ್ಯುಗಗಳು. ಶ್ರೀಕೃಷ್ಣನು ಸಮಸ್ತ ಅಂಶಾವತಾರಗಳಿಗೆ ಮೂಲಪುರುಷನು.

ವಾಸುಃ ಸರ್ವನಿವಾಸಶ್ಚ
ವಿಶ್ವಾನಿ ಯಸ್ಯ ಲೋಮಸು ।

ಶ್ರೀ ನರಸಿಂಹ ಬ್ರಹ್ಮಚಾರಿ

ತಸ್ಯ ದೇವಃ ಪರಂ ಬ್ರಹ್ಮ
ವಾಸುದೇವ ಇತೀರಿತಃ ॥

(ಬ್ರಹ್ಮವೈವರ್ತಪುರಾಣ ಶ್ರೀಕೃಷ್ಣ ಜನ್ಮಖಂಡ)

ಶ್ರೀ ಸನತ್ಕುಮಾರಮುನಿಯ ಉಕ್ತಿಯಂತೆ ಸಚ್ಚಿದಾನಂದ ವಿಗ್ರಹನಾದ ಶ್ರೀಕೃಷ್ಣನೇ ವಾಸುದೇವನು 'ವಾಸು' ಶಬ್ದದ ಅರ್ಥವಾಗಿ ಯಾರ ರೋಮಕೂಪಗಳಲ್ಲಿ ಅನಂತ ವಿಶ್ವಬ್ರಹ್ಮಾಂಡಗಳು ನೆಲೆಯಾಗಿರುವುವೋ ಆ ಸರ್ವನಿವಾಸನಾದ ವಿರಾಟ್‌ಪುರುಷನು. ಅಥವಾ ಮಹಾ ಸಂಕರ್ಷಣನು. ಈ ಮಹಾಸಂಕರ್ಷಣ ಸ್ವಾಮಿಯ ಪ್ರಭುವಾದ ಶ್ರೀಕೃಷ್ಣನೇ ಪರಬ್ರಹ್ಮಸ್ವರೂಪನಾದ ವಾಸುದೇವನು.

ಲೀಲಾಪುರುಷೋತ್ತಮನಾದ ಶ್ರೀಕೃಷ್ಣನೇ ಸರ್ವಾವತಾರ ಬೀಜಸ್ವರೂಪನಾದ ಭಗವಂತನು. ಶಾಸ್ತ್ರಪ್ರಮಾಣದಂತೆ ಶ್ರೀಹರಿಯ ಮತ್ಸ್ಯ, ಕೂರ್ಮ, ವರಾಹ, ನರಸಿಂಹ ಮೊದಲಾದ ಸಮಸ್ತ ಅವತಾರಗಳೂ ಪೂರ್ಣವಾದವುಗಳಾದರೂ ಭಗವಚ್ಛಕ್ತಿಯ ಪ್ರಕಾಶದಲ್ಲಿ ತಾರತಮ್ಯಗಳಿಗೆ ಅನುಸಾರವಾಗಿ ಭಗವಂತನ ಲೀಲೆಗಳಲ್ಲಿ ತಾರತಮ್ಯವಿರುತ್ತವೆ. ಪರಿಪೂರ್ಣ ಶಕ್ತಿಮಾನ್ ಪುರುಷನಾದ ಶ್ರೀಕೃಷ್ಣನ ಲೀಲೆಗಳಲ್ಲಿಯೇ ಸರ್ವತೋಮುಖವಾದ ಹಾಗೂ ಸರ್ವಶ್ರೇಷ್ಠವಾದ ಮಾಧುರ್ಯವನ್ನು ಕಾಣಬಹುದು. ಮಹಾವೈಕುಂಠರೂಪವಾದ ದ್ವಾರಕೆಯಲ್ಲಿ ಶ್ರೀಕೃಷ್ಣನ ಪೂರ್ಣ ಪ್ರಕಾಶವೂ; ಜನ್ಮರಹಿತನಾದ ಭಗವಂತನ ಅಚಿಂತ್ಯವಾದ ಜನ್ಮದ ಕಾರಣವಾಗಿ ಮಥುರಾಪುರಿಯಲ್ಲಿ ಶ್ರೀಕೃಷ್ಣನ ಪೂರ್ಣತರ ಪ್ರಕಾಶವೂ; ಬ್ರಹ್ಮಾ, ಶಿವ, ನಾರದ ಮೊದಲಾದ ಶ್ರೇಷ್ಠಭಕ್ತರಿಗೂ ಅಗಮ್ಯವಾದ ಅದ್ಭುತ ಬಾಲಲೀಲೆ ಹಾಗೂ ರಾಸಲೀಲೆ ಇತ್ಯಾದಿಗಳನ್ನು ಪ್ರಕಟಿಸಿದ ವ್ರಜಪುರಿಯಲ್ಲಿ ಭಗವಂತನ ಪೂರ್ಣತಮ ಪ್ರಕಾಶವೂ ಶ್ರೀಕೃಷ್ಣನಲ್ಲಿ ವೇಣುಮಾಧುರ್ಯ, ರೂಪಮಾಧುರ್ಯ, ಪ್ರೇಮಮಾಧುರ್ಯ ಹಾಗೂ ಲೀಲಾಮಾಧುರ್ಯಗಳೂ ಗೋಚರಿತವಾಗುತ್ತವೆ.

ಪರಮೇಶ್ವರನಾದ ಶ್ರೀಕೃಷ್ಣನ ಆವಿರ್ಭಾವದ ಸೂಚನೆಯಿಂದ ಪರಮಾನಂದಿತನಾದ ಬ್ರಹ್ಮನು ವಿಭಿನ್ನರಾದ ದೇವತೆಗಳಿಗೆ ಭಗವಂತನ ಸೇವೆಯ ಸಲುವಾಗಿ ಯಾದವರಲ್ಲಿ ಹಾಗೂ ಇತರ ಭಕ್ತವಂಶಗಳಲ್ಲಿ ಜನ್ಮಗ್ರಹಣಗೈಯಲು ಆದೇಶವನ್ನು

# ತಿರುಮಲೆ
# ಶ್ರೀ ವೇಂಕಟೇಶ್ವರಸ್ವಾಮಿ ಅರ್ಚನಾ ಯೋಜನೆ

ಭಕ್ತರು ತಮ್ಮ ಇಷ್ಟದೈವವಾದ ಶ್ರೀ ವೇಂಕಟೇಶ್ವರಸ್ವಾಮಿಯನ್ನು ಅರ್ಚಿಸಲು ಅನುಕೂಲವಾಗುವಂತೆ ತಿರುಮಲೆ ತಿರುಪತಿ ದೇವಸ್ಥಾನದವರು ಹೊಸದಾಗಿ ಬಾಲಾಜೀ ಅರ್ಚನಾ ಯೋಜನೆಯನ್ನು ಆರಂಭಿಸಿದ್ದಾರೆ.

## ಈ ಯೋಜನೆಯಲ್ಲಿ ಸದಸ್ಯರಾಗುವುದು ಹೇಗೆ?

ನೀವು ಮಾಡಬೇಕಾಗಿರುವುದೆಂದರೆ ಇಂಡಿಯನ್ ಓವರ್‌ಸೀಸ್ ಬ್ಯಾಂಕ್ ಮೂಲಕ ತಿ. ತಿ. ದೇ. ಗಳಿಗೆ ರೂ 5586–00 ಸಲ್ಲಿಸುವುದು. ಇದರ ಪ್ರತಿಫಲವಾಗಿ ಹತ್ತು ವರ್ಷಗಳ ಕಾಲ ವರ್ಷಕ್ಕೊಮ್ಮೆ ನೀವು ಬಯಸಿದ ದಿನ ಶ್ರೀ ವೇಂಕಟೇಶ್ವರಸ್ವಾಮಿಯ ಅರ್ಚನೆ ಮಾಡುವ ಮಹದ್ಭಾಗ್ಯ ನಿಮ್ಮದಾಗುತ್ತದೆ.

ನೀವು ಸಲ್ಲಿಸಿದ ಹಣ ಹತ್ತು ವರ್ಷಗಳಲ್ಲಿ 15000 ರೂ ಗಳಾಗಿ ಶ್ರೀ ವೇಂಕಟೇಶ್ವರಸ್ವಾಮಿಗೆ ಸೇರುವುದು. ಹಾಗಾಗಿ ಶ್ರೀ ವೇಂಕಟೇಶ್ವರ ಸ್ವಾಮಿಗೆ ಈ ಮೊತ್ತವನ್ನು ಅರ್ಪಿಸಿದ ತೃಪ್ತಿಯೂ ನಿಮಗೆ ದೊರೆಯುತ್ತದೆ.

## ಸೌಲಭ್ಯಗಳು :

ಅರ್ಚನೆಯ ದಿನದಂದು ದಾನಿಗಳಿಗೆ ತಿರುಮಲೆಯಲ್ಲಿ ವಸತಿ ಸೌಕರ್ಯ ಕಲ್ಪಿಸಲಾಗುತ್ತದೆ. ದಂಪತಿಗಳು ಅರ್ಚನ ಸೇವೆಯಲ್ಲಿ ಪಾಲುಗೊಳ್ಳಬಹುದು. ಕುಟುಂಬದ ಮೂವರಿಗೆ ಸುಪ್ರಭಾತದರ್ಶನ, ಪ್ರತ್ಯೇಕ ದರ್ಶನವುಂಟು. ಜೊತೆಗೇ ಉತ್ತರೀಯ ಅಥವಾ ಕುಪ್ಪಸದ ಕಣ, ಪ್ರಸಾದಗಳುಂಟು.

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ.

ನೀಡಿದನು. ಭಗವಂತನ ನಿತ್ಯಧಾಮವಾದ ಗೋಲೋಕದಿಂದ ಹಾಗೂ ಇತರ ವೈಕುಂಠಗಳಿಂದ ಅವತರಿಸಿದ ಪಾರ್ಷದ ಭಕ್ತರಾದ ಉದ್ಧವ, ಸಾತ್ಯಕಿ ಮೊದಲಾದವರ ಶರೀರಗಳಲ್ಲಿ ಅವರ ಅಂಶರೂಪವಾಗಿ ದೇವತೆಗಳು ಪ್ರಕಟರಾದರು. ತನ್ನ ಲೀಲೆಯ ಅಂತ್ಯದಲ್ಲಿ ಭಗವಂತನು ಮುಸಲ ಲೀಲೆಯ ಮೂಲಕವಾಗಿ ಅಂಶರೂಪವಾದ ದೇವತೆಗಳನ್ನು ಸ್ವರ್ಗಲೋಕಕ್ಕೂ, ತನ್ನ ನಿತ್ಯಪಾರ್ಷದರನ್ನು ವೈಕುಂಠಲೋಕಕ್ಕೂ ಕಳುಹಿಸಿದನು. (ಭವದ್ಭಿರಂಶೈರ್ಯದುಷೂಪಜನ್ಯತಾಂ:– "ಅಂಶೈಸ್ತದಂಶಭೂತ ಪಾರ್ಷದೈರುದ್ಧವ ಸಾತ್ಯಕಾದಿಭಿರ್ಮಿಲಿತೀಭೂಯ" – ಶ್ರೀ ವಿಶ್ವನಾಥ ಚಕ್ರವರ್ತಿ). ವಸ್ತುತವಾಗಿ ಯಾದವರೆಲ್ಲರೂ ಭಗವಂತನ ನಿತ್ಯ ಸೇವಕರು. ಪದ್ಮಪುರಾಣದಲ್ಲಿ ಭಗವಂತನ ಉಕ್ತಿಯಂತೆ–'ಏತೇ ಹಿ ಯಾದವಾಃ ಸರ್ವೇ ಮದ್ಗಣಾ ಏವ ಭಾವಿನಿ। ಸರ್ವಥಾ ಮತ್ಪ್ರಿಯಾ ದೇವಿ ಮತ್ತುಲ್ಯ ಗುಣಶಾಲಿನಃ'. ಭಗವಂತನ ಈ ಸರ್ವಶ್ರೇಷ್ಠ ಲೀಲೆಯಲ್ಲಿ ದೇವತಾ ರಮಣಿಗಳೂ ಸೇವೆಯ ಸೌಭಾಗ್ಯವನ್ನು ಪಡೆದರು. ಸರ್ವೋಚ್ಚ ರಸವಾದ ಶೃಂಗಾರರಸದ ಕಾಂತಾಭಾವದಲ್ಲಿ ಶ್ರೀಕೃಷ್ಣನನ್ನು ಸೇವಿಸಿದ ಗೋಪಿಯರು ನಾಲ್ಕುವಿಧವಾದವರು,–ಶ್ರೀಕೃಷ್ಣನ ಮಾಧುರ್ಯದಿಂದ ಮೋಹಿತರಾದ ಶ್ರುತಿದೇವಿಯರು, ದಂಡಕಾರಣ್ಯವಾಸಿಗಳಾದ ಋಷಿಗಳು, ಸ್ವರ್ಗಲೋಕದ ದೇವಕನ್ನಿಕೆಯರು ಹಾಗೂ ರಾಧೆ, ಚಂದ್ರಾವಳಿ, ಲಲಿತೆ ಮೊದಲಾದ ನಿತ್ಯಸಿದ್ಧ ಕಾಂತೆಯರು. ಪೂರ್ವಕಲ್ಪದ ಶ್ರೀಕೃಷ್ಣಲೀಲೆಯ ಅನುಶೀಲನದಿಂದ ಗೋಪೀಭಾವದಲ್ಲಿ ಭಗವಂತನ ಸೇವೆಗಾಗಿ ಉತ್ಸುಕರಾದ ದೇವಕನ್ನಿಕೆಯರೇ ನಿತ್ಯಸಿದ್ಧ ಗೋಪಿಕೆಯರ ದಾಸಿಗಳಾಗಿ ಶ್ರೀಕೃಷ್ಣಸಂಗವನ್ನು ಪಡೆದರು. ವೇದಮಾತೆಯಾದ ಬ್ರಹ್ಮಗಾಯತ್ರಿಯು ಶ್ರೀಕೃಷ್ಣನ ಉಪಾಸನೆಯನ್ನು ಗೈದು ಕಾಮಗಾಯತ್ರಿಯಾಗಿ ಜನಿಸಿ ಗೋಪಾಲತಾಪನೀ ಶ್ರುತಿಯಲ್ಲಿ ಸ್ಥಾನಗಳಿಸಿದಳು. ದಂಡಕಾರಣ್ಯವಾಸಿಗಳಲ್ಲಿ ಕೆಲವು ಋಷಿಗಳು ಭಗವಾನ್ ರಾಮಚಂದ್ರನನ್ನು ಕಂಡು ಮಧುರಭಾವದಿಂದ ಆರಾಧಿಸಲು ಇಚ್ಛಿಸಿದಲ್ಲಿ ಏಕಪತ್ನೀ ವ್ರತಸ್ಥನಾದ ಶ್ರೀರಾಮನು ಅವರನ್ನು ಅನುಗ್ರಹಿಸಹಿಲಾರದೆ ಶ್ರೀಕೃಷ್ಣ ರೂಪದಲ್ಲಿ ಸ್ವೀಕರಿಸಿದನು. ಅಖಿಲರಸಾಮೃತ ಸಿಂಧುವಾದ ಶ್ರೀಕೃಷ್ಣನು ನಂದನಂದನನ ರೂಪದಲ್ಲಿ ಜಗತ್ತಿನ ಮಾನವರನ್ನು ವಿಶೇಷವಾಗಿ ಅನುಗ್ರಹಿಸಿದನು. ದುರ್ಬಲರಾದ ಜೀವರು ತಮ್ಮ ಸಾಧನೆಯ ಮೂಲಕವಾಗಿ, ಎಂದಿಗೂ ತಲುಪಲಾರದಂತಹ ನಿತ್ಯಧಾಮವಾದ ಗೋಲೋಕ ವೈಕುಂಠದಿಂದ ಭಗವಂತನು ಕೃಪೆಯಿಂದ ಇಳಿದು ಭೂಲೋಕದಲ್ಲಿ ಪ್ರಕಟನಾಗಿ ಅಲೌಕಿಕವಾದ ನರಲೀಲೆ

ಯನ್ನು ಪ್ರದರ್ಶಿಸಿದನು. (ಅನುಗ್ರಹಾಯ ಭೂತಾನಾಂ ಮಾನುಷೀಂ ತನುಮಾಶ್ರಿತಃ).

ಇದಕ್ಕೆ ಮೊದಲಾಗಿ ಭಗವಂತನು ತನ್ನ ಅವತಾರಗಳನ್ನು ಪ್ರಕಟಿಸಿ ಭೂಭಾರವನ್ನು ಹರಣಗೊಳಿಸಿ ಧರ್ಮ ಸ್ಥಾಪನೆಯನ್ನು ಮಾಡಿದ್ದನು. ಆದರೆ ವರ್ತಮಾನ ಅವತಾರದಲ್ಲಿ ತನ್ನ ಪೂರ್ಣತಮ ರೂಪದಲ್ಲಿ ಅವತರಿಸಿದನು. (ಏತೇ ಚಾಂಶಕಲಾಃ ಪುಂಸಃ ಕೃಷ್ಣಸ್ತು ಭಗವಾನ್ ಸ್ವಯಂ। ಭಾಗವತ 1.2.28). ಪೂರ್ಣ ಪರಾತ್ಪರನೂ, ಜ್ಞಾನವಿಜ್ಞಾನರೂಪನೂ, ಸರ್ವಾತೀತನೂ, ಷಡೈಶ್ವರ್ಯಪರಿಪೂರ್ಣನೂ, ಅಚಿಂತ್ಯಾನಂತ ಕಲ್ಯಾಣಗುಣಗಣಾಕರನೂ ಪರಮಾನಂದ ಸ್ವರೂಪನೂ, ಸರ್ವಾಶ್ರಯನೂ, ಭಕ್ತವತ್ಸಲನೂ, ದೀನನಾಥನೂ ಆದ ಭಗವಂತನು ದೇವಕೀನಂದನನಾಗಿ ಪ್ರಕಟನಾಗುವನೆಂಬ ಶುಭವಾರ್ತೆಯನ್ನು ಕೇಳಿ ಭೂದೇವಿಯು ಸ್ವಸ್ಥಾನಕ್ಕೆ ಮರಳಿದಳು. ಪರಮೇಶ್ವರನಾದ ಶ್ರೀಕೃಷ್ಣನು ತನ್ನ ಅಂಶರೂಪವಾದ ಸಮಸ್ತ ಅವತಾರಗಳನ್ನು ತನ್ನಲ್ಲಿ ಸೇರಿಸಿಕೊಂಡು ಮಧುರಾಪುರಿಯಲ್ಲಿ ಆವಿರ್ಭವಿಸಿದನು.

ಶಾಸ್ತ್ರಗಳಲ್ಲಿ 'ಮಧುರಾ' ಎಂಬ ಶಬ್ದದಿಂದ ಸಮಗ್ರವಾದ ಮಧುರಾಮಂಡಲವು ಸೂಚಿತವಾಗಿದೆ. ಮಧುರಾಪುರಿ, ವೃಂದಾವನವೇ ಮೊದಲಾದ ದ್ವಾದಶವನಗಳು, ನಂದಗ್ರಾಮ, ಗೋಕುಲ, ವರ್ಷಾಣ ಮೊದಲಾದ ಕ್ಷೇತ್ರಗಳೆಲ್ಲ ಮಧುರಾಮಂಡಲದ ಅಂತರ್ಗತವಾಗಿವೆ, ಸಪ್ತಮೋಕ್ಷದಾಯಕಪುರಿಗಳಲ್ಲಿ ಮಧುರೆಯು ಪ್ರಧಾನವಾಗಿದೆ.

'ಅಯೋಧ್ಯಾ, ಮಧುರಾ, ಮಾಯಾ,
ಕಾಶೀ, ಕಾಂಚೀ, ಅವಂತಿಕಾ ।
ಪುರೀ ದ್ವಾರಾವತೀ ಚೈವ
ಸಪ್ತೈತಾ ಮೋಕ್ಷದಾಯಕಾಃ ॥'

ಮಧುರಾಮಂಡಲವು ಶ್ರೀಕೃಷ್ಣನ ಅತ್ಯಂತ ಪ್ರಿಯವಾದ ಸ್ಥಾನವಾಗಿದೆ. ಶ್ರೀಮದ್ಭಾಗವತದ ಉಲ್ಲೇಖದಂತೆ

'ಮಧುರಾ ಭಗವಾನ್ ಯತ್ರ
ನಿತ್ಯಂ ಸನ್ನಿಹಿತೋ ಹರಿಃ ॥'

ಪದ್ಮಪುರಾಣದಲ್ಲಿ —

'ಅಹೋ ಮಧುಪುರೀ ಧನ್ಯಾ
ವೈಕುಂಠಾಚ್ಚ ಗರೀಯಸೀ ।'

ಶ್ರೀ ಭಗವಂತನ ಶ್ರೀಮುಖವಾಣಿಯಂತೆ—

'ಅಹೋ ನ ಜಾನಂತಿ ನರಾ ದುರಾಶಯಾಃ
ಪುರೀಂ ಮದೀಯಾಂ ಪರಮಾಂ ಸನಾತನೀಂ'

ಏಕಮೇವಾದ್ವಿತೀಯಂ ಎಂದು ಶ್ರುತಿಗಳಿಂದ ಸ್ತುತಿಸಲ್ಪಟ್ಟ ಯಾವ ಪರತತ್ತ್ವದ ಅಂಗಕಾಂತಿಯಾದ ಬ್ರಹ್ಮಜ್ಯೋತಿಯು ಸಮಗ್ರ ಚರಾಚರ ಬ್ರಹ್ಮಾಂಡಗಳಲ್ಲಿ ವ್ಯಾಪಿಸಿರುವುದೋ, ಯಾರ ಅಂಶಮಾತ್ರವಾದ ಪರಮಾತ್ಮನು ಅನಂತಕೋಟಿ ಜೀವರ ಹೃದಯಗಳಲ್ಲಿ ಸಾಕ್ಷೀಪುರುಷನೂ ಅಂತರ್ಯಾಮಿಯೂ ಆಗಿ ನೆಲೆಸುತ್ತಿರುವನೋ, ಅಂತಹ ಷಡೈಶ್ವರ್ಯಪೂರ್ಣನಾದ ಭಗವಾನ್ ಶ್ರೀಕೃಷ್ಣನ ಆವಿರ್ಭಾವದ ಸಮಯವು ಸನ್ನಿಹಿತವಾಗಿತ್ತು. ಭಾದ್ರಮಾಸದ ಕೃಷ್ಣಪಕ್ಷದ ಅಷ್ಟಮಿಯ ದಿನ, ಮಧ್ಯರಾತ್ರಿಯ ಸಮಯದಲ್ಲಿ ಸರ್ವಗುಣ ಸಂಪನ್ನವೂ, ಸರ್ವಾಂಗಸುಂದರವೂ ಆದ ಪುಣ್ಯಕಾಲವು ಉದಯಿಸಿತು. ಅಂದಿನ ದಿನ ಬುಧವಾರವಾಗಿತ್ತು. ಮಧ್ಯರಾತ್ರಿಯ ಸಮಯದಲ್ಲಿ ಭೂಲೋಕದ ಚಂದ್ರನು ಉದಯವಾಗುತ್ತಿರುವಂತೆ ರೋಹಿಣೀ ನಕ್ಷತ್ರವನ್ನು ತನ್ನ ಜನ್ಮನಕ್ಷತ್ರವಾಗಿ ಸ್ವೀಕರಿಸಿ ಪರಿಪೂರ್ಣ ತತ್ತ್ವನಾದ ಶ್ರೀಕೃಷ್ಣ ಚಂದ್ರನು ಉದಯಿಸಿದನು. ಸಮಸ್ತ ಗ್ರಹ, ನಕ್ಷತ್ರ, ತಾರಕೆಗಳು ತಮ್ಮ ಉಗ್ರಭಾವಗಳನ್ನು ಪರಿತ್ಯಜಿಸಿ ಅತ್ಯಂತವಾದ ಶಾಂತಭಾವವನ್ನು ಅವಲಂಬಿಸಿದವು. ದುಃಖತಪ್ತವೂ, ದಾರಿದ್ರ್ಯಕ್ಲಿಷ್ಟವೂ ಆದ ಜಗತ್ತು ಭಾಗ್ಯಚಕ್ರದ ಪರಿವರ್ತನೆಯಿಂದ ಘನೀಭೂತ ಪರಮಾನಂದಸ್ವರೂಪನಾದ ಲೀಲಾಪುರುಷೋತ್ತಮನನ್ನು ಪಡೆದು ಧನ್ಯವಾಯಿತು. ಭಗವಂತನನ್ನು ಆಹ್ವಾನಿಸುವ ಸಲುವಾಗಿ ಪ್ರಕೃತಿದೇವಿಯು ದಿವ್ಯ ನವವಧುವಿನಂತೆ ಸುಸಜ್ಜಿತಳಾಗಿದ್ದಾಳೆ. ಸಮಸ್ತ ದಿಕ್ಕುಗಳೂ ದೇಶಗಳೂ ಪ್ರಸನ್ನವೂ ಮಂಗಲಕರವೂ ಆಗಿದೆ. ನದಿಗಳೂ ಸರೋವರಗಳೂ ನಿರ್ಮಲಜಲಯುಕ್ತವೂ, ವನರಾಜಿಗಳು ಪಕ್ಷಿಗಳ ಕಲರವದಿಂದಲೂ ಭ್ರಮರ ಗುಂಜನದಿಂದಲೂ ಮುಖರಿತವೂ ಆಗಿತ್ತು. ಸುವಾಸಿತವೂ ಸುಖಸ್ಪರ್ಶವೂ ಆದ ಪವಿತ್ರವಾಯುವು ಪ್ರವಹಿಸುತ್ತಿತ್ತು. ದ್ವಿಜಸಮೂಹಗಳ ಪ್ರಶಾಂತವಾದ ಹೋಮಾಗ್ನಿಗಳು ಪ್ರಜ್ವಲಿತವಾದವು. ವಸಂತಕಾಲದ ಮಲಯಾನಿಲ, ಕೋಗಿಲೆಗಳ ಕುಹೂಧ್ವನಿ, ಭ್ರಮರಗಳ ಗುಂಜನ, ಆಮ್ರಪಲ್ಲವದ ಶೋಭೆ, ಅಶೋಕ ಹಾಗೂ ಚಂಪಕಪುಷ್ಪಗಳ ಮಂದಹಾಸ, ವರ್ಷಾಕಾಲದ ಕದಂಬಾನಿಲ, ಶರತ್ಕಾಲದ ಸ್ವಚ್ಛತೆ, ಹೇಮಂತದ ಮಾಲತಿಯ ಸೊಗಸು, ಶಿಶಿರಕಾಲದ ಕುಂದ ಕುಸುಮದ ಶೃಂಗಾರ, ದಿವಾಕಾಲದ ನಳಿನೀ ಪುಷ್ಪ, ರಾತ್ರಿಕಾಲದ ಕುಮುದಿನಿ, ಪೂರ್ವಾಹ್ನ ಕಾಲದ ದೇವಪೂಜೆ, ಸತ್ಕರ್ಮಪ್ರವೃತ್ತಿ, ಮಧ್ಯಾಹ್ನಕಾಲದಲ್ಲಿ ಬಂಧು ಬಾಂಧವರೊಡನೆ ಭೋಜನ ತೃಪ್ತಿ, ಅಪರಾಹ್ನದ ವಿಶ್ರಾಮಸುಖ, ಸಾಯಂಕಾಲದ ಆನಂದೋತ್ಸವ, ರಾತ್ರಿಕಾಲದ ಶಾಂತ ಭಾವ, ರಾತ್ರ್ಯಂತದ ಜಾಗರಣೆ, ಸತ್ಯಯುಗದ ತಪಸ್ಸು, ತ್ರೇತಾಯುಗದ ಯಜ್ಞಕರ್ಮ, ದ್ವಾಪರದ ಪರಿಚರ್ಯೆ, ಕಲಿಯುಗದ ಹರಿನಾಮ ಸಂಕೀರ್ತನೆ — ಇವೆಲ್ಲವೂ ಕಾಲಗರ್ಭದಲ್ಲಿ ಅಡಗಿರುವ ಮಂಗಳಕರ ಘಟನೆಗಳು. ಇವೆಲ್ಲವನ್ನು ಏಕಕಾಲದಲ್ಲಿ ಪ್ರಕಟಿಸುತ್ತ ಸಕಲ ಸದ್ಗುಣಗಳನ್ನು ಧರಿಸಿದ ಉತ್ತಮವಾದ ಕಾಲವು ಭಗವಂತನ ಸೇವೆಗಾಗಿ ಉದಯವಾಯಿತು. ಪೂರ್ವ, ಪಶ್ಚಿಮ ಮೊದಲಾದ ದಶದಿಕ್ಕುಗಳ ದಿಕ್ಪಾಲಕರಾದ ಇಂದ್ರಾದಿ ದೇವತೆಗಳು ದಿಗ್ವಧುಗಳೊಂದಿಗೆ ಅರ್ಘ್ಯಪಾತ್ರೆಗಳನ್ನು ಧರಿಸಿ ಭಗವಂತನ ಅಭಿನಂದನೆಗಾಗಿ ಕಾಯಲಾರಂಭಿಸಿದರು. ಭೂಲೋಕ, ಭುವರ್ಲೋಕ, ಸ್ವರ್ಗಲೋಕ ಮೊದಲಾದ ಲೋಕಗಳೆಲ್ಲವೂ ಮಂಗಲಧ್ವನಿಯಿಂದ ಪೂರ್ಣವಾದವು. ಪೃಥಿವಿಯ ಸಮಸ್ತ ನಗರ, ಗ್ರಾಮ, ಗೋಷ್ಠಿ ಮೊದಲಾದ ಸ್ಥಾನಗಳೆಲ್ಲವೂ ಆನಂದ ಕೋಲಾಹಲದಿಂದಲೂ, ಮಾರ್ಜನ ಅಲಂಕರಣಗಳಿಂದಲೂ ಶೋಭಿಸಿದವು. ವಾದ್ಯಧ್ವನಿ, ಶಂಖಧ್ವನಿ, ಮಂತ್ರೋಚ್ಚಾರಣ ಇತ್ಯಾದಿಗಳು ಕರ್ಣಗೋಚರವಾದವು. ಪೂರ್ಣಾನಂದಮಯನಾದ ಭಗವಂತನ ಆಗಮನದ ಕಾರಣವಾಗಿ ಆನಂದವೇ ಮೂರ್ತಿವಂತವಾಗಿ ನದ, ನದಿ, ಅರಣ್ಯ, ಪರ್ವತ ಇತ್ಯಾದಿಯಾಗಿ ಸರ್ವತ್ರವಾಗಿ ವ್ಯಾಪಿಸಿತು. ಗಿರಿಗಹ್ವರಗಳಿಂದ ಉದ್ಭವಿಸುವ ನದಿಗಳು ಕುಲುಕುಲುನಾದದಿಂದ ಹರಿಯುತ್ತ ತಮ್ಮ ತರಂಗ ಬಾಹುಗಳನ್ನು ತಿರುಗಿಸುತ್ತ ನರ್ತಿಸಿದವು ಹಾಗೂ ತಮ್ಮ ಆನಂದವನ್ನು ಸಮುದ್ರರಾಜನಲ್ಲಿಗೂ ತಲುಪಿಸಿದವು. ಸರೋವರಗಳೆಲ್ಲವೂ ಕಮಲರಾಜಿಗಳಿಂದ ಶೋಭಿಸಿದವು. ವನವೃಕ್ಷಗಳು ನೂತನ ಪತ್ರ ಪುಷ್ಪ ಫಲ ಸಮೂಹದಿಂದ ಕಂಗೊಳಿಸಿದವು. ಯಾಜ್ಞೀಕ ವಿಪ್ರರ ಹೋಮಕುಂಡಗಳಲ್ಲಿನ ಹೋಮಾಗ್ನಿಯು ತಾನಾಗಿ ಪ್ರಜ್ವಲಿತವಾಗಿ ದಕ್ಷಿಣಾವರ್ತದಲ್ಲಿ ನರ್ತಿಸತೊಡಗಿತು. ಭಗವಂತನ ಅಂತರಂಗಭಕ್ತರು ಭಗವದಾವಿರ್ಭಾವವನ್ನು ತಿಳಿದು ಹೃದಯದಲ್ಲಿ ಆನಂದಾನುಭವವನ್ನು ಪಡೆದು ಪುಲಕಿತರಾದರು. ದೇವಲೋಕದಲ್ಲಿ ದುಂದುಭಿಯೇ ಮೊದಲಾದ ವಾದ್ಯಯಂತ್ರಗಳು ಬಾರಿಸಲ್ಪಟ್ಟು, ದೇವ, ಗಂಧರ್ವ, ಕಿನ್ನರ, ಚಾರಣ, ಸಿದ್ಧ, ಕಿಂಪುರುಷರು ಶ್ರೀಕೃಷ್ಣನ ಗುಣಗಾನಗಳನ್ನು ಗೈದರು. ಲಕ್ಷ್ಮೀದೇವಿಯ ಪಿತನಾದ ಸಿಂಧುರಾಜನು ಭಗವಂತನ ಉದಯದಿಂದ ಆನಂದಿತನಾಗಿ ಭಗವಂತನ ಸಂಬಂಧದ ಗೌರವ ಹಾಗೂ ನೀಲವರ್ಣದ ಸಲುವಾದ ವರ್ಣಸಾದೃಶ್ಯವನ್ನು ನೆನೆಯುತ್ತ ಮೃದುವಾಗಿ ಗರ್ಜಿಸಲಾರಂಭಿಸಿದನು. ಸಚ್ಚಿದಾನಂದಮಯಿಯಾದ ದೇವಕೀಮಾತೆಯಿಂದ ಸಚ್ಚಿದಾನಂದ ಘನೀಭೂತವಿಗ್ರಹನಾದ ಶ್ರೀಕೃಷ್ಣನು ಈ ರೀತಿಯಾದ ಶುಭಮುಹೂರ್ತದಲ್ಲಿ ಅವತರಿಸಿದನು.

ಶ್ರೀಕೃಷ್ಣನ ಜನ್ಮಸಂಬಂಧವಾಗಿ ಸಾಧಾರಣರು ತಿಳಿಯದಂತಹ ರಹಸ್ಯವೊಂದಿದೆ. ಇದನ್ನು ಶ್ರೀ ಚೈತನ್ಯದೇವರ ಅನುಯಾಯಿಗಳಾದ ವೃಂದಾವನದ ಗೋಸ್ವಾಮಿಗಳು ಉದ್ಘಾಟಿಸಿರುವರು. ಶ್ರೀ ಶುಕದೇವರು ಶ್ರೀಮದ್ಭಾಗವತದ ಈ ಕೆಳಗಿನ ಶ್ಲೋಕದಲ್ಲಿ ಭಗವಂತನ ಆವಿರ್ಭಾವದ ಕುರಿತಾಗಿ ಘೋಷಿಸಿದ್ದಾರೆ.

ದೇವಕ್ಯಾಂ ದೇವರೂಪಿಣ್ಯಾಂ
ವಿಷ್ಣುಃ ಸರ್ವಗುಹಾಶಯಃ ।
ಆವಿರಾಸೀತ್ ಯಥಾ ಪ್ರಾಚ್ಯಾಂ
ದಿಶೀಂದುರಿವ ಪುಷ್ಕಲಃ ॥
(ಭಾಗವತ 10 3 8)

ಈ ಶ್ಲೋಕದ ಮೂಲಕವಾಗಿ ಮಥುರಾಪುರಿಯಲ್ಲಿ ದೇವಕೀತನಯನಾದ ವಾಸುದೇವನೂ, ನಂದಗೋಕುಲದಲ್ಲಿ ಯಶೋದಾತನಯನಾದ ನಂದನಂದನ ಶ್ರೀಕೃಷ್ಣನೂ ಏಕಕಾಲದಲ್ಲಿ ಅವತರಿಸಿದ ವಿಷಯವನ್ನು ಸೂಚಿಸಲಾಗಿದೆ. ಇದನ್ನು 'ದೇಹಲೀ ಪ್ರದೀಪನ್ಯಾಯ' ವೆಂದು ಕರೆಯಲಾಗುತ್ತದೆ. ಎರಡು ಕೋಣೆಗಳ ಮಧ್ಯಭಾಗದ ಮೆಟ್ಟಿಲಿನಲ್ಲಿ ದೀಪವೊಂದನ್ನು ಇರಿಸಿದಲ್ಲಿ ಏಕಕಾಲದಲ್ಲಿ ಎರಡೂ ಕೋಣೆಗಳು ದೀಪದ ಪ್ರಕಾಶವನ್ನು ಪಡೆಯುವಂತೆ ಒಂದೇ ಶ್ಲೋಕವು ಎರಡು ಅರ್ಥಗಳನ್ನು ಸೂಚಿಸುತ್ತದೆ. ಯಾಕೆಂದರೆ ಯಶೋದೆಯು ಇನ್ನೊಂದು ಹೆಸರು ದೇವಕಿಯೆಂದಾಗಿದೆ.

ದ್ವೇನಾಮ್ನೀ ನಂದಭಾರ್ಯಾಯಾ
ಯಶೋದಾ ದೇವಕೀತಿ ಚ ।
ಅತಃ ಸಖ್ಯಮಭೂತ್ತಸ್ಯ
ದೇವಕ್ಯಾ ಶೌರಿಜಾಯಯಾ ॥
(ಹರಿವಂಶಪುರಾಣ).

ವಸುದೇವನು ಭಗವಂತನ ಆದೇಶದಂತೆ ತನ್ನ ಬಾಲಕನಾದ ಶ್ರೀಕೃಷ್ಣನನ್ನು ನಂದಗೋಕುಲಕ್ಕೆ ಕೊಂಡೊಯ್ದು ಸಮಯದಲ್ಲಿ ವಸುದೇವತನಯನು ಯಶೋದಾತನಯನಲ್ಲಿ ಐಕ್ಯವನ್ನು ಹೊಂದಿದನು.

ದೇವಕೀದೇವಿಯು ಕಂಸಕಾರಾಗೃಹದಲ್ಲಿ ಭಗವಂತನನ್ನು ಬಾಲಕನಾಗಿ ಪಡೆದ ಸಮಯದಲ್ಲಿಯೇ ಯಶೋದಾದೇವಿಯೂ ಪೂರ್ಣಪುರುಷನಾದ ಗೋಲೋಕಪತಿ ಶ್ರೀಕೃಷ್ಣನನ್ನು ಬಾಲಕನಾಗಿ ಪಡೆದಳು.

ಶ್ರೀಹರಿವಂಶದಲ್ಲಿ —

ಗರ್ಭಕಾಲೇ ತ್ವಸಂಪೂರ್ಣೇ
ಅಷ್ಟಮೇ ಮಾಸಿ ತೇ ಸ್ತ್ರಿಯೌ ।
ದೇವಕೀ ಚ ಯಶೋದಾ ಚ
ಸುಷುವಾತೇ ಸಮಂ ತದಾ ॥

ಶ್ರೀಮದ್ಭಾಗವತದಲ್ಲಿ ಯೋಗಮಾಯೆಯನ್ನು ಶ್ರೀಕೃಷ್ಣನ 'ಅನುಜೆ' ಯೆಂದು ಕರೆದು ಯಶೋದಾದೇವಿಯಲ್ಲಿ ಮೊದಲಾಗಿ ಶ್ರೀಕೃಷ್ಣನು ಜನಿಸಿದುದನ್ನು ತಿಳಿಸಲಾಗಿದೆ. ಯಶೋದೆಯು ಶ್ರೀಕೃಷ್ಣನನ್ನು ತನುಜನನ್ನಾಗಿ ಪ್ರಸವಿಸದೆ ಇದ್ದಲ್ಲಿ ಮಾಯಾ ದೇವಿಯ 'ಅನುಜೆ' ಎಂಬ ಆಖ್ಯಾನವು ಸರಿಯಾಗುವುದಿಲ್ಲ. ಇದಲ್ಲದೆ ಶ್ರೀಕೃಷ್ಣ ಯಾಮಲ ಗ್ರಂಥವು ಸ್ಪಷ್ಟವಾಗಿ ಸೂಚಿಸುವುದೇನೆಂದರೆ –

ನಂದಪತ್ನ್ಯಾಂ ಯಶೋದಾಯಾಂ
ಮಿಥುನಂ ಸಮಪದ್ಯತ ।
ಗೋವಿಂದಾಖ್ಯಃ ಪುಮಾನ್ ಕನ್ಯಾ
ಸಾಂಬಿಕಾ ಮಧುರಾಂ ಗತಾ ॥

ವಸುದೇವಸುತಃ ಶ್ರೀಮಾನ್
ವಾಸುದೇವಾಖಿಲಾತ್ಮನಿ ।
ಲೀನೋ ನಂದಸುತೇ ರಾಜನ್
ಘನೇ ಸೌದಾಮಿನೀ ಯಥಾ ॥

ಯಶೋದೆಯು ಭಗವಂತನ ಜನ್ಮಸಮಯದಲ್ಲಿ ಯೋಗನಿದ್ರಾದೇವಿಯಿಂದ ವಶೀಭೂತಳಾಗಿದ್ದು ತನಗೆ ಯಾವ ಶಿಶುವು ಜನಿಸಿರುವುದು ಎಂಬುದನ್ನು ತಿಳಿಯಲಿಲ್ಲ.

ಯಶೋದಾ ನಂದಪತ್ನೀ ಚ
ಜಾತಂ ಪರಮಬುಧ್ಯತ ।
ನ ತಲ್ಲಿಂಗಂ ಪರಿಶ್ರಾಂತಾ
ನಿದ್ರಯಾಪಗತಸ್ಮೃತಿಃ ॥
(ಶ್ರೀಮದ್ಭಾಗವತ 10.3.53)

ಬ್ರಹ್ಮವಿಮೋಹನ ಪ್ರಸಂಗದನಂತರ ಬ್ರಹ್ಮದೇವರು ಶ್ರೀಕೃಷ್ಣಸ್ತವದಲ್ಲಿ ಭಗವಂತನ ನಿತ್ಯರೂಪವನ್ನು ವರ್ಣಿಸುತ್ತ 'ಪಶುಪಾಂಗಜಾಯ' ಎಂಬ ಮಾತಿನಿಂದ ಭಗವಾನ್ ಕೃಷ್ಣನು ನಿತ್ಯಕಾಲವಾಗಿ ನಂದನಂದನನಾಗಿರುವನೆಂದು ಪ್ರಮಾಣಿಸಿರುವರು.

ಶ್ರೀರೂಪಗೋಸ್ವಾಮಿಗೆ ಸತ್ಯಭಾಮಾ ದೇವಿಯು ನೀಡಿದ ಸ್ವಪ್ನಾದೇಶದಂತೆ, ಯದುನಂದನ ಶ್ರೀಕೃಷ್ಣನೂ, ವೃಂದಾವನವಿಹಾರಿ ಶ್ರೀಕೃಷ್ಣನೂ ಲೀಲಾಭೇದದ ದೃಷ್ಟಿಯಿಂದ ಪರಸ್ಪರ ಭಿನ್ನರಾದವರು. ನಂದನಂದನನು ವೃಂದಾವನವನ್ನು ತ್ಯಜಿಸಿ ಇನ್ನೆಲ್ಲಿಗೂ ತೆರಳಲಾರನು. ಶ್ರೀಕೃಷ್ಣನ ಮುರಳೀಗಾನವೇ ಮೊದಲಾದ ಚತುರ್ವಿಧ ಮಹಾಮಾಧುರ್ಯವು ವೃಂದಾವನದಲ್ಲಿ ಮಾತ್ರವೇ ಪ್ರಕಟವಾಗಿರುವುದು.

ಕೃಷ್ಣೋ ಽನ್ಯೋ ಯದುಸಂಭೂತೋ
ಯಸ್ತು ಗೋಪೇಂದ್ರನಂದನಃ ।

(25 ನೇ ಪುಟ ನೋಡಿ)

# ಕೃಷ್ಣಾವತಾರ ವೈಭವ

ವಸುದೇವಸುತಂ ದೇವಂ
ಕಂಸ ಚಾಣೂರ ಮರ್ದನಂ ।
ದೇವಕೀ ಪರಮಾನಂದಂ
ಕೃಷ್ಣಂ ವಂದೇ ಜಗದ್ಗುರುಂ ॥

ಶ್ರೀ ವಿಷ್ಣುವಿನ ಅವತಾರಗಳು ಬಹಳ. ಅವುಗಳಲ್ಲಿ ದಶಾವತಾರ ಪ್ರಸಿದ್ಧ. ಶ್ರೀ ವೆಂಕಟೇಶ ಸುಪ್ರಭಾತದಲ್ಲಿ ಈ ಹತ್ತು ಅವತಾರಗಳನ್ನೂ ಒಂದೇ ಶ್ಲೋಕದಲ್ಲಿ ಸಂಗ್ರಹಿಸಿ ಹೀಗೆ ಹೇಳಿದೆ:

ಮೀನಾಕೃತೇ ಕಮಠ
ಕೋಲ ನೃಸಿಂಹ– ವರ್ಣಿನ್
ಸ್ವಾಮಿನ್ ಪರಶ್ವಥ ತಪೋಧನ ರಾಮಚಂದ್ರ ।
ಶೇಷಾಂಶರಾಮ ಯದುನಂದನ ಕಲ್ಕಿರೂಪ
ಶ್ರೀ ವೇಂಕಟಾಚಲಪತೇ ತವ ಸುಪ್ರಭಾತಂ ॥

ಈ ಹತ್ತು ಅವತಾರಗಳಲ್ಲೂ ಭಗವಂತನು ತನ್ನ ಲೀಲಾವಿಭೂತಿಯಾದ ಈ ಭೂಲೋಕದಲ್ಲಿ ತಾನು ನಟಿಸಿರುವ ಲೀಲಾಕೈವಲ್ಯವನ್ನೂ ಮಾಯಾಗುಣ ಚೇಷ್ಟೆಗಳನ್ನೂ ಆನಂದಾವಹವಾಗಿ ಪ್ರಕಟಿಸಿದ್ದಾನೆ,

ರಾಮಾಯಣ, ಭಾರತ, ಭಾಗವತ, ವಿಷ್ಣುಪುರಾಣಾದಿ ಕಾವ್ಯಮಯವಾದ ಪುರಾಣ ಗ್ರಂಥಗಳ ಮೂಲಕ ನಮ್ಮ ಮನಸ್ಸನ್ನು ಕಟ್ಟಿ ಆಕರ್ಷಿಸಿರುವ ಮಹಾ ಅವತಾರಗಳು ಮೂರು. ಇವು ನೃಸಿಂಹಾವತಾರ, ರಾಮಾವತಾರ ಮತ್ತು ಕೃಷ್ಣಾವತಾರ. ಈ ಅವತಾರಕಾಲಗಳನ್ನು ಈವತ್ತಿಗೂ ಹಿಂದೂಗಳಾದ ನಾವು ಜಯಂತೀ ಉತ್ಸವಗಳೆಂದು ಸಂಭ್ರಮದಿಂದ ಮನೆಮನೆಯಲ್ಲೂ, ಎಲ್ಲಾ ವಿಷ್ಣುದೇವಾಲಯಗಳಲ್ಲೂ ಆಚರಿಸುತ್ತಾ ಬಂದಿದ್ದೇವೆ. ಕೃತಯುಗಾದಿಯಲ್ಲಿ ನೃಸಿಂಹಾವತಾರವೂ, ತ್ರೇತಾಯುಗದಲ್ಲಿ ರಾಮಾವತಾರವೂ, ದ್ವಾಪರಯುಗದಲ್ಲಿ ಕೃಷ್ಣಾವತಾರವೂ ನಡೆದುದಾಗಿ ಪುರಾಣಗಳಿಂದ ತಿಳಿದುಬಂದಿದೆ. ಈ ಅವತಾರದಿನಗಳಲ್ಲಿ ಪೂಜೆ, ಭಜನೆ ವಿಶೇಷವಾದುದು. 'ರಾಮ ಹರೇ ಕೃಷ್ಣ ಹರೇ ತವ ನಾಮ ವದಾಮಿ ಸದಾ ನೃಹರೇ' ಎಂದೂ "ಹರೇ ರಾಮ ಹರೇ ರಾಮ ರಾಮ ರಾಮ ಹರೇ ಹರೇ । ಹರೇ ಕೃಷ್ಣ ಹರೇ ಕೃಷ್ಣ ಕೃಷ್ಣ ಕೃಷ್ಣ ಹರೇ ಹರೇ ॥" ಎಂದೂ ಭಜಿಸಿ ಈ ಎಲ್ಲಾ ಅವತಾರಗಳಿಗೂ ವಿಶಿಷ್ಟನಾದ ಶ್ರೀ ವಿಷ್ಣುವನ್ನು ಆರಾಧಿಸುತ್ತೇವೆ.

ಈ ಮೂರು ಅವತಾರಗಳಿಗೂ ವಿಶಿಷ್ಟವಾದ ಒಂದು ಸಂಗತಿಯೆಂದರೆ ಸನಕಸನಂದ ಮಹರ್ಷಿಗಳಿಂದ ಜಯವಿಜಯರಿಗೆ ಒದಗಿದ ಶಾಪದಿಂದ ಅವರು ಭಗವದ್ವೇಷಿಗಳಾಗಿ ಮೂರು ಜನ್ಮಗಳಲ್ಲಿ ಉದಿಸಿ ಶ್ರೀಹರಿಯಿಂದ ನಿಗ್ರಹಿಸಲ್ಪಟ್ಟು, ಶಾಪವಿಮೋಚಿತರಾಗುವುದು. ಇದರಲ್ಲಿ ಪ್ರಥಮತಃ ಕೃತಯುಗದಲ್ಲಿ ಜಯವಿಜಯರು ಹಿರಣ್ಯಾಕ್ಷ ಹಿರಣ್ಯಕಶಿಪುಗಳೆಂಬ ದಾನವರಾಗಿ ಹುಟ್ಟಿ, ತಾವೇ ಪರಬ್ರಹ್ಮಸ್ವರೂಪವೆಂದು ಸಾರಿ, ಲೋಕಹಿಂಸಕರಾಗಲು, ಶ್ರೀ ಹರಿಯು ತನ್ನ ಅದ್ಭುತವಾದ



ನರಸಿಂಹ ಸ್ವರೂಪದಿಂದ ಅವರ ಶಾಪ ಕಳೆದನು. ಹಾಗೆಯೇ ತ್ರೇತಾಯುಗದಲ್ಲಿ ರಾವಣ, ಕುಂಭಕರ್ಣರಾಗಿ ಜನ್ಮವೆತ್ತಿದ ಅವರ ಶಾಪವನ್ನು ರಾಮಾವತಾರದಲ್ಲಿ ಕಳೆದನು. ಕೊನೆಯದಾಗಿ ಶಿಶುಪಾಲ ದಂತವಕ್ತ್ರರಾಗಿ ಜನ್ಮವೆತ್ತಿದ ಅವರ ಮೂರನೇ ಜನ್ಮವನ್ನೂ ಕೃಷ್ಣಾವತಾರದಲ್ಲಿ ಕಳೆದನು. ಈ ಕೃಷ್ಣಾವತಾರದ ಕಥೆ ಪರಮ ಪಾವನ, ಪರಮ ಅದ್ಭುತ; ಪರಮ ಆನಂದಾವಹ.

ಶ್ರೀಹರಿಯು ವೈಕುಂಠಪದನಾಥ. ವೈಕುಂಠವಾದರೋ ಅಪ್ರಾಕೃತಲೋಕ, ಬ್ರಹ್ಮರುದ್ರ ಇಂದ್ರಾದಿಗಳಿಗೂ ಪ್ರವೇಶವಿಲ್ಲದ ಲೋಕ. ಅಲ್ಲಿರುವ ಶ್ರೀಹರಿ ತನ್ನ ನಾಗಪೀಠದಲ್ಲಿ ಉಪಸ್ಥಿತನಾಗಿ ಶೇಷನ ಹೆಡೆಯಮೇಲೆ ಕೈಯೊಂದನ್ನಿಟ್ಟು ದೇವೀಭೂಪಾದಿಜುಷ್ಟನಾಗಿ ನಿತ್ಯ ಮುಕ್ತರಿಂದ ಸೇವ್ಯನಾಗಿರುವನಾದರೂ ತನ್ನ ಲೀಲಾವಿಭೂತಿಯ ಲೋಕಗಳನ್ನು ಮರೆತಿಲ್ಲ. ಈ ಸಂಸಾರದ ಹೊರೆಯನ್ನು ಹೊತ್ತಿದ್ದಾನೆ. ಇದಕ್ಕಾಗಿ ಪ್ರಾಕೃತ ಲೋಕದ ಸನಿಹದಲ್ಲಿ ಕ್ಷೀರಸಾಗರದಲ್ಲಿ ಶೇಷಶಯನನಾಗಿ ಉಪಸ್ಥಿತನಾಗಿದ್ದಾನೆ. ಸಂಸಾರ ಭಾರವನ್ನು ಹೊತ್ತ ಆಯಾಸದಿಂದಿರೋ ಎಂಬಂತೆ ಪವಡಿಸಿದ್ದಾನೆ; ಯೋಗನಿದ್ರೆಯನ್ನು ಅಭಿನಯಿಸುತ್ತಾ ಇದ್ದಾನೆ. ಇಂದ್ರಾದಿ ದೇವತೆಗಳೆಲ್ಲರೂ ಕೂಡಿ ಲೋಕಕ್ಕೆ ಒದಗಿರುವ ಪೀಡೆಯನ್ನು ಅವನಿಗೆ ಶ್ರುತಪಡಿಸಲು ಬಂದಾಗ ಅವರಿಗೆ ಹರಿರೂಪಿಯಾಗಿ "ಸತ್ಯ ಜ್ಞಾನ ಸುಖ ಸ್ವರೂಪನಮಲನಾಗಿ, ಸ್ವಾಂಕಾರೂಢ ರಮಾಪ್ರಸನ್ನ ವದನ"ನಾಗಿ ಅವರಿಗೆ ವೈದೋರುತ್ತಾನೆ, ಅವರ ಆತಂಕವನ್ನು ಹೋಗಲಾಡಿಸಲು ಅ ಭ ಯ ಪ್ರ ದಾ ನ ಮಾಡುತ್ತಾನೆ. ಈಗ ಕೃಷ್ಣಾವತಾರದ ಸನ್ನಿವೇಶವನ್ನು ಗಮನಿಸೋಣ.

ಬ್ರಹ್ಮಾದಿಗಳು ಬೆಳೆಯುತ್ತಿರುವ ಅಧರ್ಮವನ್ನು ನಿವಾರಿಸಿ ಧರ್ಮವನ್ನು ಸ್ಥಾಪಿಸಬೇಕೆಂದು ಬೇಡಿದಾಗ ಭಗವಂತನು ಅವರ ಆತಂಕವನ್ನು ಗಮನಿಸಿ ಆತನು ಆಚರಿಸುವ ಲೀಲಾವಿಧಾನವನ್ನು ಅವರಿಗೆ ವಿವರಿಸಿದನು.

ಏವಂ ಸಂಸ್ತೂಯಮಾನಸ್ತು
ಭಗವಾನ್ ಪರಮೇಶ್ವರಃ।
ಉಜ್ಜಹಾರಾತ್ಮನಃ ಕೇಶೌ
ಸಿತಕೃಷ್ಣೇ ಮಹಾಮುನೇ ॥

ಉವಾಚ ಚ ಸುರಾನೇತೌ
ಮತ್ಕೇಶೌ ವಸುಧಾತಲೇ ।
ಅವತೀರ್ಯ ಭುವೋ ಭಾರ
ಕ್ಲೇಶಹಾನಿಂ ಕರಿಷ್ಯತಃ ॥

ವಸುದೇವಸ್ಯ ಯಾ ಪತ್ನೀ
ದೇವಕೀ ದೇವತೋಪಮಾ ।
ತತ್ರಾಯಂ ಮತ್ಕಚೋ ಗರ್ಭೋ
ಮತ್ಕೇಶೋ ಭವಿತಾ ಸುರಾಃ ॥

ಅವತೀರ್ಯ ಚ ತತ್ರಾಯಂ
ಕಂಸಂ ಘಾತಯಿತಾ ಭುವಿ ।

ಶ್ರೀ ಎಸ್. ನರಸಿಂಹಾಚಾರ್ಯ

ಕಾಲನೇಮಿ ಸಮುದ್ಭೂತಂ
ಇತ್ಯುಕ್ತ್ವಾಂತರ್ದಧೇ ಹರಿಃ ॥

ಶ್ರೀಹರಿಯು ತನ್ನ ಎರಡು ಕೇಶಗಳನ್ನು – ಒಂದು ಬಿಳಿ, ಒಂದು ಕಪ್ಪು – ಕಿತ್ತು ನೇಮಿಸಿ ಅವುಗಳು ದೇವಕಿಯ ಗರ್ಭದಲ್ಲಿ ಉದಿಸಿ, ಕಂಸಾದಿಗಳ ಸಂಹಾರಮಾಡಿ, ಭೂಭಾರವಿಳಿಸುವುದಾಗಿ ಹೇಳಿ ಅಂತರ್ಧಾನನಾದನು. ನಂತರ ಯೋಗನಿದ್ರೆಯನ್ನು ಆಹ್ವಾನಿಸಿ ಆಕೆಗೆ ಶ್ರೀಹರಿಯು ಕೊಟ್ಟ ಆದೇಶ ಹೀಗಿದೆ.

ನಿದ್ರೇ ಗಚ್ಛ ಮಮಾದೇಶಾತ್
ಪಾತಾಳ ತಲಸಂಶ್ರಯಾಮ್ ।
ಏಕೈಕತ್ವೇನ ಷಡ್ಗರ್ಭಾನ್
ದೇವಕೀ ಜಠರಂ ನಯ ॥

ಹತೇಷು ತೇಷು ಕಂಸೇನ
ಶೇಷಾಖ್ಯೋಂಶ ಸ್ತತೋ ಮಮ ।
ಅಂಶಾಂಶೇ ನೋದರೇ
ತಸ್ಯಾಸ್ಸಪ್ತಮಂ ಸಂಭವಿಷ್ಯತಿ ॥

ಗೋಕುಲೇ ವಸುದೇವಸ್ಯ
ಭಾರ್ಯಾನ್ಯಾ ರೋಹಿಣೀ ಸ್ಥಿತಾ ।
ಕಸ್ಯಾಃ ಸಂಭೂತಿಸಮಂ
ದೇವಿ ನೇಯ ಸ್ತ್ವಯೋದರಮ್ ॥

ಸಪ್ತಮೋ ಭೋಜರಾಜಸ್ಯ
ಭಯಾದ್ರೋಧೋಽವರೋಧತಃ ।
ದೇವಕ್ಯಾಃ ಪತಿತೋ ಗರ್ಭ
ಇತಿ ಲೋಕೋ ವದಿಷ್ಯತಿ ॥

ಗರ್ಭ ಸಂಕರ್ಷಣಾತ್ ಸೋಽಥ
ಲೋಕೇ ಸಂಕರ್ಷಣೇತಿ ವೈ ।
ಸಂಜ್ಞಾಮವಾಪ್ಸ್ಯತೇ ವೀರಃ
ಶ್ವೇತಾದ್ರಿಶಿಖರೋಪಮಃ ॥

ತತೋಽಹಂ ಸಂಭವಿಷ್ಯಾಮಿ
ದೇವಕೀಜಠರೇ ಶುಭೇ ।
ಗರ್ಭಂ ತ್ವಯಾ ಯಶೋದಾಯಾ
ಗಂತವ್ಯಂ ಅವಿಲಂಬಿತಮ್ ॥

ಪ್ರಾವೃಟ್ಕಾಲೇ ಚ ನಭಸಿ
ಕೃಷ್ಣಾಷ್ಟಮ್ಯಾಂ ಅಹಂ ನಿಶಿ ।
ಉತ್ಪತ್ಸ್ಯಾಮಿ ನವಮ್ಯಾಂ ತು
ಪ್ರಸೂತಿಂ ತ್ವಮವಾಪ್ಸ್ಯಸಿ ॥

ಹೀಗೆ ಭಗವಂತನು ಯೋಗಮಾಯೆಗೆ ನಿರ್ದೇಶಿಸಿ ತಾನು ಮೊದಲು ಶ್ವೇತಕೇಶದಿಂದ ಶ್ವೇತಾದ್ರಿ ಶಿಖರೋಪಮನಾದ ಬಲರಾಮನಾಗಿಯೂ, ನಂತರ ಕೃಷ್ಣ ಕೇಶದಿಂದ ಸರ್ವರಿಗೂ ಆಕರ್ಷಣೆಯುಂಟಾಗುವ ಮೋಹನಾಂಗನಾದ ಕೃಷ್ಣನಾಗಿಯೂ ಉದಯಿಸಿದ. ಯೋಗಮಾಯೆಯು ಯಶೋದೆಯಲ್ಲಿ ಶಿಶುವಾಗಿ ಜನಿಸಿದಳು.

ಭಗವಂತನು ಪ್ರಾಕೃತಿಕ ಮಕ್ಕಳು ಜನಿಸುವ ರೀತಿಯಲ್ಲಿ ಅಲ್ಲ. ಪೂರ್ವೇತಿಹಾಸಗಳಿಲ್ಲದೇ, ಮಾಯಾ ಚೇಷ್ಟೆಗಳಿಲ್ಲದೇ ಭಗವದವತಾರವಾಗುವುದಿಲ್ಲ. ಮಥುರೆಯಲ್ಲಿ ಉಗ್ರಸೇನ ಮಹಾರಾಜನಿಗೆ ಕಂಸನೆಂಬ ಸುತನೂ, ದೇವಕಿಯೆಂಬ ಸುತೆಯೂ ಇದ್ದರು. ದೇವಕಿಯನ್ನು ಯದುವಂಶೋತ್ಪನ್ನನಾದ ವಸುದೇವನಿಗೆ ಕೊಟ್ಟು

## ಶ್ರೀ ಪದ್ಮಾವತೀ ದೇವಾಲಯ



### ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

ಮದುವೆಯಾಯಿತು. ಮದುವೆಯಾದಾಗ ವಧೂವರರನ್ನು ರಥಾರೋಹಣ ಮಾಡಿಸಿ, ಕಂಸನು ಸಾರಥಿಯಾಗಿ, ಮೆರವಣಿಗೆಯನ್ನು ಒಯ್ಯುತ್ತಿದ್ದಾಗ ಒಂದು ಆಶ್ಚರ್ಯ ನಡೆಯಿತು. ಆ ಮಹಾಸಂಭ್ರಮದ ಸಮಯದಲ್ಲಿ ಕಂಸನಿಗೆ ಇದ್ದಕ್ಕಿದ್ದ ಹಾಗೆ ಮನಸ್ಸಿನಲ್ಲಿ ದುಗುಡವುಂಟಾಯಿತು, ಅವನ ಮನಸ್ಸಿಗೆ ನಾಟುವ ಭಯಾವಹ ಆಕಾಶವಾಣಿ ಕೇಳಿಸಿತು.

ಅಥಾಂತರಿಕ್ಷೇ ವಾಗುಚ್ಚೈಃ
ಕಂಸಮಾಭಾಷ್ಯ ಸಾದರಂ ।
ಮೇಘಗಂಭೀರ ನಿರ್ಘೋಷಂ
ಸಮಾಭಾಷ್ಯೇದಮಬ್ರವೀತ್ ॥

ಯಾಮೇತಾಂ ವಹಸೇ ಮೂಢ
ಸಹ ಭರ್ತ್ರಾ ರಥೇ ಸ್ಥಿತಾಮ್ ।
ಅಸ್ಯಾಸ್ತ್ವಾಷ್ಟಮೋ ಗರ್ಭಃ
ಪ್ರಾಣಾನಪಹರಿಷ್ಯತಿ ॥

ಅತಿ ಸಂತೋಷದ ಸಮಯದಲ್ಲಿ ಅತಿವಿಷಾದದ ಸಂಗತಿಯೇ! ಅದೇನು ವಿಧಿಯ ಬರಹ! ಮೊದಲೇ ದುಷ್ಟ ಕ್ರೂರಿ ಆದ ಕಂಸನಿಗೆ ಈ ಆಕಾಶವಾಣಿ ಆಘಾತವುಂಟುಮಾಡಿತು. ತನ್ನ ತಂಗಿಯ ಮಗ ತನ್ನನ್ನು ಕೊಲ್ಲುವನೆಂಬ ಮಾತಿನಿಂದ ಸಮಯ ವಿವೇಚನೆಯಿಲ್ಲದೆ, ಭಾವನಾ ಪರವಶತೆಯಿಂದ ಕೂಡಿ ಕಂಸನು ರಥದಲ್ಲಿ ಗಂಡನ ಜೊತೆಯಲ್ಲಿ ಕುಳಿತಿದ್ದ ದೇವಕಿಯನ್ನು ಹಿಡಿದು ಖಡ್ಗದಿಂದ ಕೊಲ್ಲಲು ಉದ್ಯುಕ್ತನಾದ.

ತನಗೆ ಮೃತ್ಯುವನ್ನು ತರತಕ್ಕ ಭಗಿನಿಯನ್ನು ಆಗಿಂದಾಗಲೇ ಕೊಂದು ತನ್ನ ಮೃತ್ಯುವನ್ನು ತಪ್ಪಿಸಿಕೊಳ್ಳಬಹುದೆಂದು ಎಣಿಸಿದನು. ಬುದ್ಧಿವಂತನಾದ ವಸುದೇವನು ಅವನಿಗೆ ತಿರುಗಿಬೀಳದೆ ಉಪಾಯವಾಗಿ ಅವನನ್ನು ಕೊಲೆಗಡುಕತನದಿಂದ ಹಿಂತಿರುಗಿಸಲು ಹೀಗೆಂದನು.

“ಇವಳು ನಿನ್ನನ್ನು ಕೊಲ್ಲುವವಳಲ್ಲ, ಇವಳ ಮಕ್ಕಳು; ಆದ್ದರಿಂದ ಈ ಶುಭ ಸನ್ನಿವೇಶದಲ್ಲಿ ಅವಳನ್ನು ಹತ್ಯೆ ಮಾಡಬೇಡ. ಅವಳ ಮಕ್ಕಳನ್ನು ನಿನಗೆ ಒಪ್ಪಿಸಿಬಿಡುವೆ”ನೆಂದು ಕಂಸನನ್ನು ಅನುನಯದಿಂದ ವಸುದೇವನು ಒಪ್ಪಿಸಿ ಅಪಾಯದಿಂದ ಪಾರಾದನು. ನಂತರ ನಾರದ ಋಷಿಗಳು ಬಂದು ಕಂಸನಿಗೆ ಹೇಳಿದರು.

ಕಂಸಾಯ ಚಾಷ್ಟಮೋ ಗರ್ಭೇ
ದೇವಕ್ಯಾ ಧರಣೀಧರಃ ।
ಭವಿಷ್ಯತೀತಿ ಆಚಚಕ್ಷೇ
ಭಗವಾನ್ ನಾರದೋ ಮುನಿಃ ॥

ಭಗವಂತನೇ ಸಾಕ್ಷಾತ್ತಾಗಿ ದೇವಕಿಯ ಗರ್ಭದಲ್ಲಿ ಉದಿಸುವನೆಂದು ನಾರದರಿಂದ ಕೇಳಿದ ಕಂಸ” ಆ ಮಾಯಾವಿ ಏನೇನು ಮಾಡುವನೋ ಎಂದು ಆ ದಂಪತಿಗಳ ಮನೆಯನ್ನೇ ಸೆರೆಯಾಗಿಸಿದನು.

ಹೀಗೆ ಗೃಹ ಬಂಧನದಲ್ಲಿದ್ದ ದೇವಕೀ ವಸುದೇವರಿಗೆ ಆರು ಮಕ್ಕಳಾಗಿ ಎಲ್ಲವೂ ಕಂಸನಿಂದ ಕೊಲ್ಲಲ್ಪಟ್ಟವು; ಏಳನೇಗರ್ಭವು ದೇವಕಿಯಲ್ಲಿ ಹುಟ್ಟಿ ನಷ್ಟವಾಗಿ ರೋಹಿಣಿಯ ಜಠರದಲ್ಲಿ ಬೆಳೆದು ಬಲರಾಮನ ಜನನವು ಗೋಕುಲದಲ್ಲಿ ಆಯಿತು. ಈಗ ದೇವಕಿಯ ಜಠರದಲ್ಲಿ ಎಂಟನೇ ಗರ್ಭ ಬೆಳೆಯುತ್ತಿದೆ, ಅವತಾರಕಾಲ ಸನ್ನಿಹಿತವಾಗಿದೆ.

ಜಾಜ್ವಲ್ಯಮಾನಳಾಗಿದ್ದ ದೇವಕಿಯನ್ನು ನೋಡಲು ಲೋಕದ ಜನರು ಅಶಕ್ತರಾದರು, ಕ್ಷೋಭೆ ಹೊಂದಿದರು, ಆದರೆ ಅಗೋಚರರಾಗಿ ದೇವತೆಗಳು ಪರಬ್ರಹ್ಮನ ತಾಯಿಯಾಗತಕ್ಕವಳನ್ನು ಸ್ತೋತ್ರ ಮಾಡುತ್ತಿದ್ದರು. ಆಗ ಅಷ್ಟಮ ಗರ್ಭದಲ್ಲಿ ಬೆಳೆದ ಮಗು ದೇವಕಿಗೆ ಜನನವಾಯಿತು.

ಏವಂ ಸಂಸ್ತೂಯಮಾನಾ ಸಾ
ದೇವೈರ್ದೇವ ಮಧಾರಯತ್ ।
ಗರ್ಭೇಣ ಪುಂಡರೀಕಾಕ್ಷಂ
ಜಗತ ಸ್ತ್ರಾಣಕಾರಣಂ ॥

ತತೋಽಖಿಲ ಜಗತ್ಪದ್ಮ
ಬೋಧಾಯಾ ಚ್ಯುತಭಾನುನಾ ।
ದೇವಕೀ ಪೂರ್ವಸಂಧ್ಯಾಯಾಂ
ಆವಿರ್ಭೂತಂ ಮಹಾತ್ಮನಾ ॥

ತಜ್ಜನ್ಮ ದಿನಮತ್ಯರ್ಥಂ
ಆಹ್ಲಾದ್ಯಮಲದಿಙ್ಮುಖಮ್ ।
ಬಭೂವ ಸರ್ವಲೋಕಸ್ಯ
ಕೌಮುದೀ ಶಶಿನೋ ಯಥಾ ॥

ಸಂತಸ್ಸಂತೋಷಮಧಿಕಂ
ಪ್ರಶಮಂ ಚಂಡಮಾರುತಾಃ ।
ಪ್ರಸಾದಂ ನಿಮ್ನಗಾಯಾತಾ
ಜಾಯಮಾನೇ ಜನಾರ್ದನೇ ॥

ಶುಭಕಾಲದಲ್ಲಿ ಅಷ್ಟಮೀನಿಶಿ ಪೂರ್ವಸಂಧ್ಯೆಯಲ್ಲಿ ಭಗವಾನ್ ಶ್ರೀಕೃಷ್ಣನ ಜನನವಾಯಿತು. ಬಂಧನಗೃಹದಲ್ಲಿ ಬಂಧಿತರಾದ ಮಾತಾ ಪಿತೃಗಳು ತಮ್ಮ ಮುದ್ದುಕಂದನನ್ನು ನೋಡಿದರು.

ಭಗವಂತನ ಮಾತಾಪಿತೃಗಳಾಗಲು ಭಾಗ್ಯಶಾಲಿಗಳಾಗಿದ್ದ ದೇವಕೀ ವಸುದೇವರು ಚತುರ್ಭುಜನಾದ, ಶಂಖ ಚಕ್ರಾದ್ಯಾಯುಧೋಪೇತನಾದ, ಶ್ರೀವತ್ಸಾಂಕಿತನಾದ ಶ್ರೀಹರಿಯನ್ನು ಶಿಶುರೂಪವಾಗಿ ನೋಡಿ, ಆನಂದಿಸಿ ಸ್ತುತಿಸಿ ಕಂಸನ ಭಯದಿಂದ ಅವನನ್ನು ತನ್ನ ದಿವ್ಯರೂಪವನ್ನು ಉಪಸಂಹರಿಸಿ, ಪ್ರಾಕೃತ ಮಗುವಿನಂತೆ ತೋರ್ಪಡಿಸಿಕೊಳ್ಳಲು ಪ್ರಾರ್ಥಿಸಿದರು. ಭಗವಾನನು “ ತಥಾಸ್ತು ” ಎಂದು ವಿಧೇಯತೆಯಿಂದ ತನ್ನ ಅಪ್ರಾಕೃತರೂಪವನ್ನು ಉಪಸಂಹರಿಸಿದನು.

ಮಾತಾಪಿತೃಗಳಿಗೆ ತಮ್ಮ ಈ ಶಿಶುವನ್ನು ಹೇಗಾದರೂ ರಕ್ಷಿಸಿಕೊಳ್ಳಬೇಕೆಂಬ ತವಕವಾಯಿತು. ಅದಕ್ಕೆ ತಕ್ಕಹಾಗೆ ಹರಿ ಪ್ರೇರಣೆಯೂ ಆಯಿತು. ವಸುದೇವನು ಆ ಮಗುವನ್ನು ಸೆರೆಮನೆಯಿಂದ ಗೋಕುಲಕ್ಕೆ ಒಯ್ಯಲು ಪ್ರೇರಿತನಾಗಿ ಯತ್ನಿಸಲು, ಕಾವಲುಗಾರರು ನಿದ್ರಾವಶರಾದರು, ಸಂಕೋಲೆಗಳು ಕಳಚಿ ಹೋದುವು; ಸೆರೆಮನೆಯ ಕದಗಳು ತಾವಾಗಿಯೇ ಬಿಚ್ಚಿಕೊಂಡವು. ಹೀಗೆ ಎಲ್ಲವೂ ಸಹಕರಿಸಿದುವು. ಹೊರಗಡೆ ಮಳೆಯು ಧೋ ಎಂದು ಸುರಿಯುತ್ತಿರಲು, ಆದಿಶೇಷನು ಮಗುವಿಗೆ ಕೊಡೆಯಾಗಿ, ಪ್ರವಾಹ ಪೀಡಿತ ಯಮುನೆಯು ವಸುದೇವನಿಗೆ ಕಾಲುದ್ದ ನೀರಿನದಾಗಿ ವಸುದೇವನಿಗೆ ಪ್ರಯಾಣ ಸುಖಕರವಾಯಿತು. ಭಗವಂತನನ್ನು ಗೋಕುಲಕ್ಕೆ ಒಯ್ದು ಯಶೋದೆಯ ಮಗ್ಗುಲಲ್ಲಿ ಮಲಗಿಸಿ ಮಂಗಳಾಚರಣೆ ಮಾಡಿ ಹೊರಬಂದನು.

ಹೀಗೆ ಆಶ್ಚರ್ಯಕರ ರೀತಿಯಲ್ಲಿ ಭಗವಂತನು ಉದಯಿಸಿ, ತಂದೆ ತಾಯಿಯರಿಗೆ ಸಂತೋಷವನ್ನುಂಟುಮಾಡಿ, ದುಷ್ಟರ ದಮನಕ್ಕಾಗಿ ಗೋಕುಲವನ್ನು ಸೇರಿದನು. ಕೃಷ್ಣನ ಆಶ್ಚರ್ಯಾವಹ ಚೇಷ್ಟೆಗಳು ಗೋಕುಲದಲ್ಲಿ ಜನಜನಿತವಾದುವು. ಕಂಸನಿಂದ ಕಳುಹಿಸಲ್ಪಟ್ಟ ಸಕಲ ರಾಕ್ಷಸರನ್ನು ಬಾಲಲೀಲಾಭಿನಯದಿಂದ ನಾಶಮಾಡಿ, ಸಕಾಲದಲ್ಲಿ ಮಧುರೆಗೆ ಬಂದು ಕಂಸಾದಿಗಳನ್ನು ವಧಿಸಿ, ತಂದೆತಾಯಿಯರ ಸೆರೆಬಿಡಿಸಿ, ಮಧುರಾಪುರಿಗೆ ನೆಮ್ಮದಿ ತಂದನು. ಹೀಗೆ ಆಶ್ಚರ್ಯಾವಹ ರೀತಿಯಲ್ಲಿ ಶ್ರೀಕೃಷ್ಣನ ಅವತಾರವಾಯಿತು ಮತ್ತು ಗೋಕುಲದಿಂದ ಮಧುರೆಗೆ ಬಂದು ತಂದೆ ತಾಯಿಯರ ಜೊತೆ ನೆಲಸಿದನು.

ಮುಂದೆ ವಯಸ್ಸಿಗೆ ಬಂದ ಶ್ರೀಕೃಷ್ಣನು ಭೂಭಾರವಿಳುಹಲು ಸ್ವಂತವಾಗಿಯೂ, ಪಾಂಡವರೊಡಗೂಡಿಯೂ ಅದ್ಭುತವಾದ ಕೆಲಸಗಳನ್ನು ಮಾಡಿದನು. ಅವತಾರಕಾಲದಲ್ಲೇ ತನ್ನ ಸತ್ಯಸ್ವರೂಪವನ್ನು ತೋರಿಸಿ, ನಂತರ ಅದರಲ್ಲೇ ಮುಂದುವರೆದು, ಆರ್ತತ್ರಾಣ ಪರಾಯಣನಾಗಿ ದುಷ್ಟ ಶಿಕ್ಷಕನಾಗಿ ಮೆರೆದುದು ಈ ಅವತಾರದ ಒಂದು ವೈಶಿಷ್ಟ್ಯ. ಅವನ ಜೀವನ ಚರಿತ್ರೆಯು ಅಮೃತ ವರ್ಷಿಣಿಯಾಗಿ, ಜ್ಞಾನ ಬೋಧವಾಗಿ, ಅಭಯಪ್ರದವಾಗಿ ಮುಮುಕ್ಷುಗಳಿಗೆ ಸದಾ ಉಪಾಸ್ಯವಾಗಿದೆ. ಕೃಷ್ಣ ಚರಿತ್ರೆಯು ಕಲಿಕಲ್ಮ

(24ನೇ ಪುಟ ನೋಡಿ)



ಮಾರಾಟಕ್ಕೆ ಸಿದ್ಧವಾಗಿವೆ
ತಾಮ್ರ ಚಿತ್ರಪಟಗಳು
ಶ್ರೀ ವೆಂಕಟೇಶ್ವರಸ್ವಾಮಿ
ಹಾಗೂ
ಶ್ರೀ ಪದ್ಮಾವತೀ ಅಮ್ಮನವರ
ಆಕರ್ಷಕ ತಾಮ್ರಚಿತ್ರಗಳ ಫಲಕಗಳು
ಸುಲಭ ಬೆಲೆಯಲ್ಲಿ ದೀರ್ಘಕಾಲ
ಬಾಳಿಕೆ ಬರುವ ಸುಂದರ ತಾಮ್ರ ಚಿತ್ರಗಳು
ಎಲ್ಲ ತಿ. ತಿ. ದೇ. ಪ್ರಕಟನ ಮಾರಾಟ ಮಳಿಗೆಗಳಲ್ಲೂ
ದೊರೆಯುತ್ತವೆ.

# ಕುರುಡುಮಲೆಯ ಗಣಪತಿ

ಕರ್ನಾಟಕ ರಾಜ್ಯದ ಚಿನ್ನದ ಆಗರವಾಗಿರುವ ಕೋಲಾರ ಜಿಲ್ಲೆಯಲ್ಲಿನ ಮುಳಬಾಗಿಲು, ರಾಜ್ಯದ ಮೂಡಲ ಬಾಗಿಲಾಗಿಯೇ ಪ್ರಸಿದ್ಧಿ ಪಡೆದಿದೆ. ಇಲ್ಲಿಗೆ ಸುಮಾರು 10 ಕಿ.ಮೀ. ದೂರದಲ್ಲಿರುವ "ಕುರುಡುಮಲೆ" ರಾಜ್ಯದಲ್ಲಿನ ಅತೀ ಎತ್ತರದ ಗಣಪತಿಯನ್ನು ಪಡೆದ ಚಿಕ್ಕ ಚೊಕ್ಕ ಯಾತ್ರಾಸ್ಥಳ.

ಈ ಕ್ಷೇತ್ರಕ್ಕೆ ಕೌಂಡಿನ್ಯಗಿರಿ ಎಂಬ ಹೆಸರೂ ಇದೆ. ಇಲ್ಲಿ ಕೌಂಡಿನ್ಯ ಋಷಿಯು ತಪಸ್ಸು ಮಾಡಿದ ಗುಹೆಯೊಂದಿದೆ. ಅಲ್ಲದೆ ಕೌಂಡಿಣ್ಯ ನದಿ ಹುಟ್ಟುವ ಪುಣ್ಯಕ್ಷೇತ್ರವಿದು.

ಎರಡು ಬೆಟ್ಟಗಳ ನಡುವೆ ವಿಶಾಲವಾದ, ಭವ್ಯವಾದ ದೇವಸ್ಥಾನದಲ್ಲಿ ಕ್ಷೇತ್ರಮೂರ್ತಿ ನಯನ ಮನೋಹರನಾದ, ಸಾಲಗ್ರಾಮ ಶಿಲೆಯ ಶ್ರೀಗಣಪತಿಯು ವಿರಾಜಿಸಿದ್ದಾನೆ. 14 ಅಡಿಯ ಈ ಮೂರ್ತಿಯು 4 ಅಡಿ ಎತ್ತರದ ಪೀಠದ ಮೇಲೆ ರಾರಾಜಿಸುತ್ತಾನೆ.

ಈ ಮೂರ್ತಿಯು ಅಗಸ್ತ್ಯ ಋಷಿಗಳಿಂದ ಪ್ರತಿಷ್ಠಿತವಾದದ್ದು ಎಂಬ ಐತಿಹ್ಯವಿದೆ. ಪುರಾಣ ಪ್ರಸಿದ್ಧವಾದ ಈ ಗಣಪತಿಯನ್ನು ಮಹರ್ಷಿಗಳೂ ಅಪರೋಕ್ಷಿಗಳೂ ಈಗಲೂ ಸಹ ಮಾನವರಿಗೆ ಅಗೋಚರವಾಗಿ ಆಗಾಗ್ಗೆ ಪೂಜಿಸುತ್ತಾರೆಂಬ ಮಾತಿದೆ.

ಆನೆಗಳ ಆರಾಧ್ಯ ದೈವ ಎಂದು ಹೆಸರಾಗಿರುವ ಗಜಮುಖನ ಮೂರ್ತಿಯು ದೇವಸ್ಥಾನದ ಹತ್ತಿರವಿರುವ "ಆನೆಗೆರೆ" ಎಂಬ ಕೆರೆಯ ಬಳಿಯಲ್ಲಿ ಇತ್ತೆಂದೂ, ಅಲ್ಲದೆ ನೀರಿಗಾಗಿ ಬರುತ್ತಿದ್ದ ಆನೆಗಳು ಈ ಮೂರ್ತಿಯನ್ನು ಆರಾಧಿಸುತ್ತಿದ್ದವೆಂದೂ ಪ್ರತೀತಿ ಇದೆ.

ನಮ್ಮ ರಾಜ್ಯದ ಮೈಸೂರಿನ ಶ್ರೀಮನ್ ಮಹಾರಾಜರು (ಶ್ರೀ ಜಯಚಾಮರಾಜೇಂದ್ರ ಒಡೆಯರ್.) ಆಗಾಗ್ಗ ಬಂದು ಹೋಮ ಹವನಾದಿಗಳನ್ನು ಆಚರಿಸುತ್ತಿದ್ದ ವಿಷಯವನ್ನು ಗ್ರಾಮದ ಅನೇಕ ಹಿರಿಯರು ಹೇಳುತ್ತಿರುತ್ತಾರೆ. ರಾಜ್ಯದ ಮುಖ್ಯಮಂತ್ರಿಗಳಾಗಿದ್ದ ಡಿ. ದೇವರಾಜ ಅರಸುರವರು ಇಲ್ಲಿಗೆ ಆಗಿಂದಾಗ್ಗೆ ಭೇಟಿ ಕೊಡುತ್ತಿದ್ದು, ದೇವಾಲಯದ ಆವರಣದಲ್ಲಿ ಒಂದು ಕಲ್ಯಾಣ ಮಂಟಪವನ್ನು ನಿರ್ಮಿಸಲು ಸರ್ಕಾರದಿಂದ ಧನ ಸಹಾಯವನ್ನು ಮಂಜೂರು ಮಾಡಿದ್ದರು. ಕಲ್ಯಾಣ ಮಂಟಪವು ಈಗ ಮುಕ್ತಾಯವಾಗಿ, ಉಪಯೋಗಕ್ಕೆ ಸಿದ್ಧವಾಗಿದೆ.

ಚಾರಿತ್ರಿಕ ದೃಷ್ಟಿಯಿಂದಲೂ ಸಹ ಕುರುಡುಮಲೆ ಗ್ರಾಮವು ಅಷ್ಟೇ ಪ್ರಸಿದ್ಧಿ



ಹೊಂದಿದೆ. ಚೋಳ ಮತ್ತು ಹೊಯ್ಸಳರ ಕಾಲದಲ್ಲಿ ಇದು ಒಂದು ಪ್ರಾಂತೀಯ ರಾಜಧಾನಿಯಾಗಿತ್ತೆಂದು ತಿಳಿದು ಬರುತ್ತದೆ. ಇಲ್ಲಿನ ಒಂದು ಕೆರೆಗೆ ಚೋಳನ ಕೆರೆ ಎಂದು ಹೆಸರಿರುವುದು ಈ ಮಾತನ್ನು ಸಮರ್ಥಿಸುತ್ತದೆ. ಈ ಊರಿನ ಸುತ್ತಮುತ್ತಲೂ ದೊರೆತಿರುವ ಕೆಲವು ಬಂಗಾರದ ನಾಣ್ಯಗಳಿಂದಲೂ, ಹಲವಾರು ಶಿಲಾಶಾಸನಗಳಿಂದಲೂ ಇದು ಸಂಪದ್ಭರಿತವಾದ ರಾಜಧಾನಿಯಾಗಿತ್ತೆನ್ನಬಹುದು.

ಶ್ರೀ ಗಣಪತಿಯ ದೇವಸ್ಥಾನಕ್ಕೆ ಅನತಿ ದೂರದಲ್ಲಿ ಇರುವ ಈಶ್ವರ ದೇವಾಲಯದ ಕಲಾಕೃತಿಯು ಜಕಣಾಚಾರಿಯದಾಗಿದೆ. ಈ ದೇವಾಲಯವನ್ನು ನಿರ್ಮಿಸಿರುವ ರೀತಿ, ಶಿಲ್ಪಕಲಾ ಕೌಶಲ್ಯ ಮೇಲಿನ ಮಾತನ್ನು ದೃಢಪಡಿಸುತ್ತವೆ.

ತಿರುಪತಿಗೆ ಹೋಗುವ ಮುನ್ನ, ಅನೇಕ ಯಾತ್ರಾರ್ಥಿಗಳು ಶ್ರೀ ವಿಘ್ನರಾಜನ ಪೂಜೆಗೈದು ಮುಂದೆ ಹೊರಡುವ ರೂಢಿಯೂ ಇದೆ.

ಪ್ರತಿ ವರ್ಷವೂ ಭಾದ್ರಪದ ಮಾಸದಲ್ಲಿ ವಿನಾಯಕ ಚತುರ್ಥಿಯ ಮರುದಿನ ಇಲ್ಲಿ ಶ್ರೀಗಣಪತಿಯ ರಥೋತ್ಸವವು ಬಹು ವಿಜೃಂಭಣೆಯಿಂದ ನಡೆಯುತ್ತದೆ. ಅಲ್ಲದೆ ಮೂರು ದಿನಗಳ ಕಾಲ ನಡೆಯುವ ಉತ್ಸವದಲ್ಲಿ ಊರಿನವರೇ ನಡೆಸುವ "ಪುಷ್ಪಪಲ್ಲಕಿ" ಉತ್ಸವವು ಅತ್ಯಂತ ವಿಜೃಂಭಣೆಯಿಂದಿರುತ್ತದೆ.

ಪವಿತ್ರವಾದ ಈ ಕ್ಷೇತ್ರ ದರ್ಶನ, ಶ್ರೀ ವಿನಾಯಕನ ಪೂಜೆ, ಇಲ್ಲಿನ ಪ್ರಕೃತಿ ಸೌಂದರ್ಯ, ನೈಸರ್ಗಿಕ ಪ್ರಶಾಂತತೆ ನಮ್ಮ ಆಧ್ಯಾತ್ಮಿಕ ದೃಷ್ಟಿಯನ್ನು ವೃದ್ಧಿಗೊಳಿಸಿ ನಮ್ಮ ಆತ್ಮೋದ್ಧಾರಕ್ಕೆ ಕಾರಣವಾಗುತ್ತದೆ ಎಂಬುದರಲ್ಲಿ ಅತಿಶಯೋಕ್ತಿಯಿಲ್ಲ.

ಗಜಮುಖನೆ ಮೆರೆವೇಕ ದಂತನೆ<br>
ನಿಜ ಗುಣಾನ್ವಿತ ಪರಶುಧಾರನೆ<br>
ರಜತ ಗಿರಿಗೊಡೆಯನ ಕುಮಾರನೆ<br>
ವಿದ್ಯೆವಾರಿಧಿಯೆ<br>
ಅಜನು ಹರಿರುದ್ರಾದಿಗಳು ನೆರೆ<br>
ಭಜಿಸುತಿರನವರತ ನಿನ್ನನು<br>
ತ್ರಿಜಗ ವಂದಿತ ಗಣಪ ಮಾಳ್ಪುದು<br>
ಮತಿಗೆ ಮಂಗಳವ

— ಕುಮಾರವ್ಯಾಸ.

★

**ಕೆ. ಎನ್. ಅಪ್ರಮೇಯ**

# ಶ್ರೀ ಶ್ರೀನಿವಾಸನ ಹಾಡುಗಳು

## ಸಂಪುಟ-೨

**ಶ್ರೀ ಶ್ರೀನಿವಾಸನ ಹಾಡುಗಳು**
ಸಂಪುಟ – 2
ಪುಟಗಳು: 12+104+4
ಬೆಲೆ: ರೂ. 4–50
**ಪ್ರತಿಗಳಿಗಾಗಿ :**
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿ. ತಿ. ದೇ. ತಿರುಪತಿ.

ತಿರುಪತಿ ತಿರುಮಲೆ ದೇವಸ್ಥಾನಗಳ ದಾಸಸಾಹಿತ್ಯ ಪ್ರಾಜೆಕ್ಟ್‌ನ ಸಾಹಿತ್ಯ ವಿಭಾಗದ ದ್ವಿತೀಯ ಕುಸುಮವಾದ ಶ್ರೀ ಶ್ರೀನಿವಾಸನ ಹಾಡುಗಳು ಸಂಪುಟ-2 ಶ್ರೀಪಾದರಾಯರು, ವ್ಯಾಸರಾಯರು, ವಾದಿರಾಜರು, ಹಾಗೂ ಕನಕದಾಸರುಗಳು ಶ್ರೀನಿವಾಸನನ್ನು ಕುರಿತು ರಚಿಸಿದ ಕೀರ್ತನೆಗಳಿಂದ ಕೂಡಿದೆ.

ಹರಿದಾಸರೆಲ್ಲರಿಗೂ ತಿರುಪತಿ ತಿಮ್ಮಪ್ಪ ಆರಾಧ್ಯಮೂರ್ತಿಯೇ ಆದರೂ ದಾಸಸಾಹಿತ್ಯದ ಪ್ರಥಮ ಘಟ್ಟದ ಮೇಲಿನವರಿಗೆ ಭಕ್ತಿಭಾವದಿಂದಲೇ ಅಲ್ಲದೆ ಭೌಗೋಳಿಕ ತಾವಿನ ದೃಷ್ಟಿಯಿಂದಲೂ ಆತ ಹತ್ತಿರದವನೇ ಆಗಿ ಇವರೆಲ್ಲರಿಂದ ಸ್ತುತಿಸಲ್ಪಟ್ಟಿದ್ದಾನೆ ಎಂಬುದು ಮುಳಬಾಗಿಲಿನ ನರಸಿಂಹತೀರ್ಥದ ಶ್ರೀಪಾದರಾಜರು–ವ್ಯಾಸರಾಯರು –ವಾದಿರಾಜ, ಕನಕದಾಸರು. – ಇವರುಗಳ ಗುರುಶಿಷ್ಯಸಂಬಂಧಗಳಿಂದ ಸ್ಪಷ್ಟವಾಗತಕ್ಕ ಅಂಶ (ಪುರಂದರರೂ ವ್ಯಾಸರಾಯರ ಶಿಷ್ಯರೇ. ಅವರು ಶ್ರೀನಿವಾಸನ ಬಗ್ಗೆ ಬರೆದ ಕೃತಿಗಳು ಶ್ರೀನಿವಾಸನ ಹಾಡುಗಳು ಸಂಪುಟ-1 ರಲ್ಲಿ ಪ್ರಕಟವಾಗಿವೆ.) ಶ್ರೀಪಾದರಾಜರು ಶ್ರೀರಂಗದಲ್ಲಿಯೂ ಕೆಲಕಾಲವಿದ್ದವರು. ತಮಿಳು ಆಳ್ವಾರರ ಪಾಶುರಗಳನ್ನು ಕೇಳಿದ್ದವರು. ಧರ್ಮವನ್ನು ಜನಭಾಷೆಯಲ್ಲಿ ನಿರೂಪಿಸಲು ಕನ್ನಡದಲ್ಲಿನ ವಚನಕಾರರಂತೆ ಪ್ರಯತ್ನಿಸಬಹುದೆಂಬ ಸಾಧ್ಯತೆಯನ್ನು ತಿಳಿದವರು. ಹರಿದಾಸ ಸಾಹಿತ್ಯದ ಪ್ರತಿಷ್ಠಾಪನಾಚಾರ್ಯರು. ಅವರ ಹಾಗೂ ಅವರ ನೇರ ಶಿಷ್ಯ ಪ್ರಶಿಷ್ಯರ ಹಾಡುಗಳು ಕನ್ನಡದಲ್ಲಿಯೇ ಅಲ್ಲದೆ ಶ್ರೀನಿವಾಸನ ಸಾಹಿತ್ಯದಲ್ಲೂ ಗಮನಾರ್ಹವೇ ಎನ್ನಬೇಕು.

ಪ್ರಸ್ತುತ ಕಿರುಕೃತಿ ಒಂದು ನೂರ ನಾಲ್ಕು ಪುಟಗಳಿಂದ ಕೂಡಿದ್ದು ನಾಲ್ಕು ಮಂದಿ ಖ್ಯಾತ ಲೇಖಕರು ಇಲ್ಲಿನ ಹರಿದಾಸರ ಜೀವನ ಪರಿಚಯವನ್ನು ನೀಡಿದ್ದಾರೆ, ಅವರುಗಳೆಂದರೆ ಡಾ|| ಜಿ. ವರದರಾಜಾರಾವ್. (ಶ್ರೀಪಾದರಾಜರು) ದಿ| ಕೊರಟೆ ಶ್ರೀನಿವಾಸರಾವ್ (ವ್ಯಾಸರಾಯರು) ಡಾ|| ಟಿ ಎನ್. ನಾಗರತ್ನ (ವಾದಿರಾಜರು) ಬಿ. ಎಸ್. ಸರೋಜ (ಕನಕದಾಸರು).

ಡಾ|| ವರದರಾಜಾರಾಯರು ಹರಿದಾಸ ಸಾಹಿತ್ಯದಲ್ಲಿಯೂ ಮುಖ್ಯವಾಗಿ ಶ್ರೀಪಾದರಾಜರ ಸಾಹಿತ್ಯದಲ್ಲಿಯೂ ಜನವರಿತ ವಿದ್ವಾಂಸರು. ಶ್ರೀಪಾದರಾಜರ ಜೀವನ ಚರಿತ್ರೆಯನ್ನು ಅವರ ಜೀವನದ ವಿವಾದಾಂಶಗಳಿಗೆ ಕೈ ಹಾಕದೆ ಸರ್ವಮಾನ್ಯವಾದ ಅಂಶಗಳನ್ನು ಮಾತ್ರ ತೆಗೆದುಕೊಂಡು ಹದಿನೆಂಟು ಪುಟಗಳಲ್ಲಿ ಪರಿಚಯ ಮಾಡಿಕೊಟ್ಟಿದ್ದಾರೆ. ದಿ|| ಕೊರಟೆ ಶ್ರೀನಿವಾಸರಾಯರು ವಿಜಯನಗರ ಇತಿಹಾಸದಲ್ಲೂ ಹರಿದಾಸ ಸಾಹಿತ್ಯೇತಿಹಾಸದಲ್ಲೂ ನುರಿತ ಪರಿಶೋಧಕರಾಗಿದ್ದವರು. ವ್ಯಾಸರಾಜರ ಜೀವನವನ್ನು, ಹಾಗೆಯೇ ಅಂದಿನ ವಿಜಯನಗರದ ಸಂಸ್ಕೃತಿಯನ್ನೂ ಪರಿಚಯಿಸಿದ್ದಾರೆ. ವಾದಿರಾಜರ ಬಗ್ಗೆ ಬರೆದಿರುವ ಡಾ|| ಟಿ ಎನ್. ನಾಗರತ್ನ ಅವರು ವಾದಿರಾಜರ ಬಗ್ಗೆ ಅಧಿಕಾರಪೂರ್ವಕವಾದ ರೀತಿಯಲ್ಲಿ ಸಂಶೋಧನೆ ನಡೆಸಿದವರು. ಪವಾಡಗಳಿಂದ ಬೇರ್ಪಡಿಸಿ ವಾದಿರಾಜರ ಜೀವನವನ್ನು ಸಾಹಿತ್ಯವನ್ನು ಅವಲೋಕಿಸಿದ್ದಾರೆ. ಅವರ ಕನ್ನಡ ಸಂಸ್ಕೃತಗಳೆರಡಲ್ಲಿನ ಸವ್ಯಸಾಚಿತ್ವವನ್ನು ನಿರೂಪಿಸಿದ್ದಾರೆ, ಕನಕದಾಸರ ಜೀವನವನ್ನು ಕುರಿತು ಬರೆದಿರುವ ಬಿ. ಎಸ್. ಸರೋಜ ಅವರು ಕನಕದಾಸರು ಹಾಗೂ ಪುರಂದರದಾಸರ ಕೃತಿಗಳ ಆಧಾರದಿಂದ ಕನಕದಾಸರ ಹಿರಿಮೆಯನ್ನೂ ಬಿತ್ತರಿಸಿದ್ದಾರೆ. ಇಲ್ಲಿ ಅವರ ಜೀವನದಲ್ಲಿನ ಪವಾಡಗಳನ್ನು ಕುರಿತೂ ಸಾಕಷ್ಟು ಹೊಳಹುಗಳಿವೆ.

ಸುಪ್ರಭಾತ ಕೃತಿಗಳು, ಬಾ ಎಂದು ಕರೆಯುವ ಕೃತಿಗಳು, ಆರ್ತನಾದ ಕೃತಿಗಳು ಸ್ವಾಮಿ ಸಂದರ್ಶನ ಪರ ಕೃತಿಗಳು, ನಮನ ಪರ ಕೃತಿಗಳು, ಮಹಿಮಾ ಪ್ರತಿಪಾದಕ ಕೃತಿಗಳು, ಪ್ರಾರ್ಥನಾ ಕೃತಿಗಳು, ಲಾಲಿ ಸೇವಾಪರ ಕೃತಿಗಳು, ಉಪದೇಶಾತ್ಮಕ ಕೃತಿಗಳು–ಎಂಬಂತೆ ಕ್ರಮದಲ್ಲಿ ಜೋಡಿಸಲಾಗಿರುವ ಇಪ್ಪತ್ತೈದು ಕೃತಿಗಳ ಪುಟ್ಟ ಪುಸ್ತಕ ದಾಸಸಾಹಿತ್ಯ ಪ್ರಾಜೆಕ್ಟಿನ ವಿಶೇಷಾಧಿಕಾರಿ ಶ್ರೀ ಕೆ. ಅಪ್ಪಣ್ಣಾಚಾರ್ಯರಿಂದ ಸಂಪಾದಿತವಾಗಿದೆ. ಈ ಕೃತಿಗಳೊಡನೆ ಶ್ರೀಪಾದರಾಜರು ವ್ಯಾಸರಾಯರು, ವಾದಿರಾಜರು, ಕನಕದಾಸರುಗಳ ಮಹಿಮೆಯನ್ನು ವರ್ಣಿಸುವ ನಾಲ್ಕು ಕೀರ್ತನೆಗಳೂ ಇವೆ. ಆಯಾಯಾ ಜೀವನ ಚರಿತ್ರೆಯ ವಿವರಣೆಯ ಸಂದರ್ಭದಲ್ಲಿ ಆಯಾಯಾ ಲೇಖಕರು ಬಳಸಿರುವ ಕೃತಿಗಳೂ ಇವೆ.

ಎಲ್ಲ ಕೃತಿಗಳಿಗೂ ಕಠಿನಪದಾರ್ಥ ಟಿಪ್ಪಣಿಗಳೂ ಇರುವುದು ಇಲ್ಲಿನ ಒಂದು ವಿಶೇಷ. ತತ್ತ್ವೇಶರು, ಛಪ್ಪನ್ನಾರು ದೇಶಗಳು – ಮೊದಲಾದವುಗಳನ್ನು ವಿವರವಾಗಿ ಹೆಸರಿಸಿರುವುದೂ, ಕನಕದಾಸರ ಸಂಬಂಧಗಳ ಕೊಂಡಿಯನ್ನು ಗುರುತಿಸುತ್ತ ಹೋಗುವುದೂ ಓದುಗರಿಗೆ ಹೆಚ್ಚಿನ ಲಾಭವಾಗಿದೆ. ಶ್ರೀರಾಮನರಸಯ್ಯ ಅವರು ಚಿತ್ರಿಸಿದ ನಾಲ್ಕು ಹರಿದಾಸರ ಚಿತ್ರಗಳೂ ಇವೆ. ಇಷ್ಟೆಲ್ಲ ಇದ್ದರೂ ಇದರ ಬೆಲೆ ನಾಲ್ಕೂವರೆ ರೂಪಾಯಿಗಳು ಮಾತ್ರವೇ. ನಿತ್ಯ ಪಾರಾಯಣಕ್ಕೆ ಅನುಕೂಲಕರವಾದ ಕೃತಿಯಾದ ಇದನ್ನು ಆಸ್ತಿಕರೆಲ್ಲ ಕೊಳ್ಳಬಹುದು. ★




## ಶ್ರೀ ತಿರುಪತಿ ಬ್ರಹ್ಮೋತ್ಸವ

ಲೇಖಕರು : ರಾ. ಗು. ಜೋಶಿ.
ಪುಟಗಳು : 18, ಬೆಲೆ : ರೂ. 3-00
ಪ್ರಕಾಶಕರು : ವಿಜಯಶ್ರೀ ಪ್ರಕಾಶನ.
ಗಾಜಗಾರಪೇಟೆ, ರಾಯಚೂರು, 1983.

ಹದಿಮೂರಕ್ಕೂ ಹೆಚ್ಚು ವಿದ್ವತ್ಪೂರ್ಣವಾದ ಗ್ರಂಥಗಳನ್ನು ರಚಿಸಿರುವ ಶ್ರೀ ರಾ. ಗು. ಜೋಶಿಯವರ 'ತಿರುಪತಿ ಬ್ರಹ್ಮೋತ್ಸವ' ಪುಸ್ತಕವು ಲೇಖಕರು ಕಂಡಂತೆ ಬರೆದಿರುವ 'ರೂಪಕ'ದ ಪುಸ್ತಕವಾಗಿದೆ. ಜಯತೀರ್ಥ ರಾಜಪುರೋಹಿತ ಮತ್ತು ವಸಂತ ಕುಷ್ಟಗಿ ಯಂತಹವರ ಪ್ರಸ್ತಾವನಾ ನುಡಿಗಳನ್ನೂ ಈ ಪುಸ್ತಕ ಒಳಗೊಂಡಿದೆ. "...ಲೇಖಕರು ಈ ಚಿಕ್ಕ ನುಡಿಮಾಲೆಯನ್ನು ತಮ್ಮ ಪ್ರೀತಿಯ ದೇವರಿಗಾಗಿ ತಮ್ಮ ತೃಪ್ತಿಗಾಗಿ ಮತ್ತು ಭಾವುಕ ಭಕ್ತರ ಸಂತೋಷಕ್ಕಾಗಿ ರಚಿಸಿದ್ದಾರೆ. ಇಂಥ ಕೃತಿಗಳಲ್ಲಿ ಭಕ್ತಿಯ ದರ್ಶನ ಮುಖ್ಯವಾಗಿರುತ್ತದೆ. ಭಾವುಕರಲ್ಲಿ ಇನ್ನಷ್ಟು ಭಕ್ತಿಯನ್ನು ಹೆಚ್ಚಿಸುವ ಕೃತಿ ಇದಾಗ ಬಲ್ಲದು".

"...ಲೇಖಕರು ದಾಸಸಾಹಿತ್ಯದ ಸತತಾಭ್ಯಾಸಿಗಳು. ಸ್ವತಃ ದಾಸಜೀವನವನ್ನು ನಡೆಸುತ್ತಿರುವವರೂ ಆಗಿರುವುದರಿಂದ ಅವರ ಮನದಲ್ಲಿ ನಡೆಯಲ್ಲಿ ನುಡಿಯಲ್ಲಿ ದಾಸವಾಣಿಯು ಸದಾ ಕುಕಿಲ್ಗರಿಯುತ್ತಿರುತ್ತದೆ. ಅವರಿಂದ ಸಾಹಿತ್ಯಶ್ರೀ ಇನ್ನೂ ವೈವಿಧ್ಯಮಯವಾಗಿ ಕೀರ್ತಿಯನ್ನು ಪಡೆಯಲೆಂದು ಪರಮಾತ್ಮನಲ್ಲಿ ಪ್ರಾರ್ಥಿಸುತ್ತೇನೆ".

ಹೀಗೆಂದು ಪ್ರಕಾಂಡ ವಿದ್ವಾಂಸರು ರಾ. ಗು. ಜೋಶಿಯವರ ಪುಸ್ತಕವನ್ನು ಪ್ರಶಂಸಿಸಿದ್ದಾರೆ. ಈ ಹೊಗಳಿಕೆ ಕೇವಲ ಹುಸಿಯಾಗಿರದೆ ದಿಟವಾಗಿರುವುದು ಕಂಡು ಬರುವುದು ಇಡೀ ಪುಸ್ತಕವನ್ನು ಒಳಹೊಕ್ಕು ಓದಿದಾಗ ಎಂದು ಹೇಳಬಹುದು. ಇಲ್ಲಿ ಎದ್ದು ತೋರುವ ಪ್ರಧಾನ ಅಂಶವೆಂದರೆ ಇಡೀ ರೂಪಕದಲ್ಲಿ ಗೋಚರಿಸುವ ಸರಳತೆ ಹಾಗು ಲೇಖಕರ ಪ್ರಾಮಾಣಿಕತೆ. ಸರಳವಾಗಿರುವ ಕೆಲವು ಪದ್ಯಗಳು ಲೇಖಕರ ನೈಜ ಮನೋಭಾವನೆಯನ್ನು ಸ್ಫುಟವಾಗಿ ಹಿಡಿಯುವಂತಹುದಾಗಿವೆ.

"ಬಂದೆನಯ್ಯ ಗೋವಿಂದ ಶೆಟ್ಟಿ
ಅಪ್ಪ ಅತಿರಸ ತುಪ್ಪ ಪನ್ನಪಾಲು
ಒಪ್ಪುವ ಸಕ್ಕರೆ ಯಾಲಕ್ಕಿಯು
ಅಪ್ಪು ರೂಪವಾದ ಕಜ್ಜಾಯವೇನೆಲ್ಲ
ಜಪ್ಪನ್ನ ದೇಶಕ್ಕೆ ಮಾರುವ ಶೆಟ್ಟಿ

ಈ ಪದ್ಯದಲ್ಲಿನ ದ್ವಿತೀಯ ಪ್ರಾಸ ಹಾಗು ಮನೋಹರವಾದ ಪದಗಳ ಬಳಕೆ ಗಮನಾರ್ಹವಾದುದು.

ಲೇಖಕರು ಅದೆಷ್ಟು ಚೆನ್ನಾಗಿ ವರ್ಣನೆ ಮಾಡಿದ್ದಾರೆ ಎಂಬುದನ್ನು ವಿವರಿಸಿ ಹೇಳುವುದಕ್ಕಿಂತಲೂ ನೇರವಾಗಿ ಆ ಪದ್ಯಗಳನ್ನೇ ಆಸ್ವಾದಿಸಬಹುದು.

ಶ್ರೀ ವೆಂಕಟೇಶ್ವರನ ವರ್ಣನೆಯಂತೂ ಭಾವುಕ ಭಕ್ತರ ಹೃದಯದಲ್ಲಿ ಕಾಲಕ್ಕೂ

ತಾನು ನಿಂತುದೆ ಭೂವೈಕುಂಠ ಎಂದು
ತೋರುವ
ಹಸ್ತ, ಭಕ್ತರ ಸಂರಕ್ಷಕನೆಂಬ ಅಭಯ
ಹಸ್ತ

ಶ್ರೀನಿವಾಸದೇವರ ರಚನೆಯಿಂದ ಎತ್ತಿಕೊಂಡಿದೆ ಎಂದು ಒಂದು ಕಡೆ ಪ್ರಾಮಾಣಿಕವಾಗಿ ಹೇಳಿಕೊಂಡಿರುವ ಲೇಖಕರು ಮಿಕ್ಕ ಕಡೆಗಳಲ್ಲಿಯೂ ಯಾವ ಯಾವ ದಾಸರ ಧಾಟಿಯನ್ನು ಅನುಕರಿಸಿದ್ದಾರೆಂದು ತಿಳಿಸಿದ್ದರೆ

# ಸರಳ ರೂಪಕ

ನಿಲ್ಲುವಂತೆ ವರ್ಣನೆ ಮಾಡಿರುವ ಲೇಖಕರು ತಾವು ಕಣ್ಣಾರೆ ಕಂಡುದನ್ನು ಹಾಗೇ ಬಣ್ಣಿಸುತ್ತಾರೆ. ವೆಂಕಟರಮಣಸ್ವಾಮಿಯ ಚೆಲುವು ಸ್ವಾಮಿಯ ಅಕ್ಕ ಪಕ್ಕದ ಪರಿಸರದ ವರ್ಣನೆ ಗಮನಿಸಿ. ಲೇಖಕರು ಯಾತ್ರಿಕನ ಮೂಲಕ ಇದನ್ನು ಹೇಳಿಸುವಂತೆ ರೂಪಕದಲ್ಲಿ ಇದನ್ನು ಅಡಗಿಸಿದ್ದಾರೆ.

ಅದೋ ಸ್ವಾಮಿಯ ದರ್ಶನ ಅದೆಷ್ಟು
ಚೆಲುವಿನ ನಿಲುವು
ಚಿನ್ನದ ಮುಕುಟದ ಮಿಂಚುಕಣ್ಣು
ಥಳಿಸುವುದು
ತೋರ ಅವಯವಗಳ ಮಾಟ
ಮನಸ್ಸಿಗೆ ಉಲ್ಲಾಸ
ಅಕ್ಕಪಕ್ಕದ ಸೊಡರು ಸ್ವಾಮಿಯ
ದಿವ್ಯಮೂರ್ತಿಯ ದರುಶನಕೆ
ದಿವ್ಯ ಜ್ಯೋತಿಗಳು ವಿವಿಧ ಹೂಗಳ
ಅನಸೊಂಡಿಲಗಾತ್ರ ಮಾಲೆ

ಚೆನ್ನಾಗಿರುತ್ತಿತ್ತು. ಏಕೆಂದರೆ ಕೆಲವು ಪದ್ಯಗಳ ರಚನಾಧಾಟಿಯಂತೂ ಪ್ರಮುಖ ದಾಸರ ಕೀರ್ತನೆಗಳ ಒಂದೆರಡು ಪದಗಳನ್ನು ತೆಗೆದು ಹಾಕಿ ರಚಿತವಾದಂತಿದೆ. "ತೂಗಿರೆ ರಂಗನ ತೂಗಿರೆ ಕೃಷ್ಣನ... ಎಂಬುದು ಇಲ್ಲಿ ಉದಾಹರಿಸಲು ಯೋಗ್ಯವಾಗಿದೆ. "ದೇವ ಬಂದ..." ದಲ್ಲೂ ಹೀಗೇ ಆಗಿದೆ.

ಹಾಗೆಯೇ ಕೆಲವೊಂದು ಪಂಕ್ತಿಗಳ ರಚನೆಯೂ ಒಂದಕ್ಕೊಂದು ಸಂಬಂಧವಿಲ್ಲದಂತೆ ಬಂದಿದೆ.

'ಮನಸ್ಸಿಗೆ ಉಲ್ಲಾಸ ಉತ್ಸವದ ವಾತಾವರಣ. ಗಳದೊಳು ವನಮಾಲೆ ವೈಜಯಂತಿ ಪದಕ, ವಿಸ್ತರ ಕದಪಿಲಿ ಹೊಳೆವ ಕುಂಚಲ ಪ್ರಾ.' ಇಂತಹ ಹಲವು ಪಂಕ್ತಿಗಳ ರಚನೆಯಿಂದ ಅಸಂಭಾವ್ಯತೆಯ ದೋಷ ಉಂಟಾಗಿದೆ. ಪ್ರಸನ್ವೆಂಕಟರಂಗಾ, ಉಟ್ಟು ಪೊಂದಟ್ಟಿ, ವಿಠಲರೇಯ, ಸರ್ವ

ತಾತ್ವಿಕರುಂಟು, ಅವರು ಬೇಸತ್ತು, ಹರುಷಂಕುರಿಸೆ, ಕೋನೇರಿವಾಸನೆ, ಕುಟ್ಕಲ ಲೋಲದೃಷ್ಟೇ, ಹಾಕಿಗಿಂದೇಳೋ, ಉತ್ಸುಕತೆಯದಾಗಿವೆ, ಮುಂತಾದ ಶಬ್ದಗಳಂತೂ ಉಚ್ಚಾರಣೆಯ ದೃಷ್ಟಿಯಿಂದಲೂ, ಸುಮನೋಹರವಾಗಿ ಹಾಡಲು ಅಡಚಣೆಯನ್ನುಂಟುಮಾಡುವಂತಹುವೂ ಆಗಿವೆ. ಕೆಲವು ಪಂಕ್ತಿಗಳಲ್ಲಿನ ಭಾವ ಸ್ಪಷ್ಟವಾಗಲು ಬಹು ಕಾಲ ಹಿಡಿಯುತ್ತದೆ.

ಉದಾಹರಣೆಗೆ "ವಿವಿಧ ಹೂಗಳ ಆನೆಸೊಂಪಿಲ ಗಾತ್ರ ಮಾಲೆ", "ಚಿನ್ನದ ಮುಕುಟದ ಮಿಂಚುಕಣ್ಣು ಥಳಿಸುವುದು."

ಯಾತ್ರಿಕ ಹೇಳುವುದು ಹೀಗೆ – ನೋಡು ದಾಸರು ಭಕ್ತಿಪೂರಿತರಾಗಿ ಭಗವಂತನನ್ನು ಎಬ್ಬಿಸುವ ಪರಿ.

ನಿದ್ರೆಗೆವೆ ಹಾಕದಿರು ನೀರೊಳಗೆ ನೀನಿರು
ಉಪದ್ರ ಭೂಮಿಗೆ ಕಳಿ
ಕಶ್ಯಪನ ಸುತನ ಆಳಿ ಸಮುದ್ರರಾಣಿಯ
ಪಡಿರಾಯ ಕ್ಷತ್ರಿಯಕಡಿ
ಮುದ್ರೆ ಭೂಮಿಗೆ ಕಳುಹೋ

ಇಲ್ಲಿ ಯಾತ್ರಿಕ ಹೇಳುತ್ತಿರುವುದು. ದಾಸರೆಂದು. ಆದರೆ ಯಾವ ದಾಸರು? ಲೇಖಕರೇ ಅವನ್ನು ಸ್ಪಷ್ಟಪಡಿಸದೆ ಇದ್ದರೆ ಮತ್ತಾರು ಸ್ಪಷ್ಟಪಡಿಸುವವರು.

ಇನ್ನು ಪುಸ್ತಕದಲ್ಲಿನ ಮುದ್ರಣದೋಷವನ್ನು ಕುರಿತು ಹೇಳದಿರುವುದೇ ಮೇಲು.

ಕೆಲವೊಮ್ಮೆ ದಾಸರ ರಚನೆಗಳನ್ನು ಹೆಸರಿಸುವ ಲೇಖಕರು ಬಹಳಷ್ಟು ಕಡೆ ಹಾಗೆ ಮಾಡೇ ಇಲ್ಲ. ಒಟ್ಟಿನಲ್ಲಿ ಬಹು ಶ್ರಮ ವಹಿಸಿ ಧನ ವ್ಯಯಮಾಡಿ 'ತಿರುಪತಿ ಬ್ರಹ್ಮೋತ್ಸವ' ಪುಸ್ತಕವನ್ನು ಹೊರತಂದಿರುವ ಲೇಖಕರ ಹಿರಿಮೆ ಮೆಚ್ಚುವಂತಹುದೇ ಆಗಿದೆ.

- ಕೆ. ರಮಾನಂದ

(19ನೇ ಪುಟದಿಂದ)

ಶಪ್ತ, ಶ್ರೀ ಹರಿಯು ಕೃಷ್ಣಾಭಿದಾನದಿಂದ ಹುಟ್ಟಿ, ತಾಯಿಗೆ ಅಪ್ರಮೇಯನಾಗಿ ಬಾಲ ಲೀಲೆಗಳಿಂದ ಮುಕುಂದನಾಗಿ, ಗೋಪಿವಲ್ಲಭನಾಗಿ, ಗೋವಿಂದನಾಗಿ, ಮುರುಳೀಧರನಾಗಿ, ಕಾಳಿಂಗ ಮರ್ದನನಾಗಿ, ರಾಧಾರಮಣನಾಗಿ, ಪೂತನಾಜೀವಿತಹರನಾಗಿ, ಅನೇಕಾನೇಕ ರಾಕ್ಷಸರ ಮರ್ದನನಾಗಿ, ಕಂಸ ಚಾಣೂರ ಶಿಶುಪಾಲಾದಿಗಳ ಪ್ರಾಣಹರನಾಗಿ, ಪಾಂಡವ ಪಕ್ಷಪಾತಿಯಾಗಿ, ಗೀತಾಚಾರ್ಯನಾಗಿ, ಅನೇಕಾನೇಕ ಅದ್ಭುತಮಾಯಾಲೀಲೆಗಳನ್ನು ಆಚರಿಸಿ ಅವನ ಅವತಾರ ವೈಭವದಿಂದ ಇಂದಿಗೂ ನಮ್ಮ ಹೃದ್ದೇಶದಲ್ಲಿ ವಟಪತ್ರಶಾಯಿಯಾದ ಬಾಲಮುಕುಂದನಾಗಿ ಪ್ರತಿಷ್ಠಿತನಾಗಿದ್ದಾನೆ. ಜಯ ಜಯ ಯಾದವ ಸಿಂಹ, ಜಯ ಜಯ ದೇವಕೀ ಕಂದ.

ಅತಸೀಪುಷ್ಪಸಂಕಾಶಂ
ಹಾರನೂಪುರಶೋಭಿತಂ ।
ರತ್ನ ಕಂಕಣ ಕೇಯೂರಂ
ಕೃಷ್ಣಂ ವಂದೇ ಜಗದ್ಗುರುಂ ॥

(16 ನೇ ಪುಟದಿಂದ)

ವೃಂದಾವನಂ ಪರಿತ್ಯಜ್ಯ
ಸ ಕ್ವಚಿನ್ನೈವ ಗಚ್ಛತಿ ॥

ಕಂಸನ ಕಾರಾಗೃಹದ ಘೋರ ಅಂಧಕಾರವನ್ನು ಭಗವಂತನ ಅಂಗಜ್ಯೋತಿಯು ಮರೆಮಾಡಿತ್ತು. ಚತುರ್ಭುಜವಿಗ್ರಹನೂ, ಸರ್ವಾಭರಣ ಮಂಡಿತನೂ, ಅಸಮಾನಸುಂದರನೂ ಆದ ಭಗವಂತನನ್ನು ಪುತ್ರರೂಪದಲ್ಲಿ ಕಂಡು ವಸುದೇವ ದೇವಕಿಯರು ಏಕಕಾಲದಲ್ಲಿ ಪರಮಾನಂದ ಹಾಗೂ ಪರಮಾಶ್ಚರ್ಯಗಳಿಂದ ಕೂಡಿದರು. ದಂಪತಿಗಳು ಭಗವಂತನನ್ನು ನಮಿಸಿ ಸ್ತುತಿಸಿದರು. ತನ್ನ ಮೇಘಗಂಭೀರವೂ ಮೃದುಮಧುರವೂ ಆದ ಧ್ವನಿಯಿಂದ ಭಗವಂತನು ಸಂಭಾಷಿಸಿ ಅವರ ಪೂರ್ವ ಜನ್ಮಗಳ ವೃತ್ತಾಂತವನ್ನು ತಿಳಿಸಿ, ಪೂರ್ವದಲ್ಲಿಯೂ ತಾನು ಪೃಶ್ನಿಗರ್ಭ ಹಾಗೂ ವಾಮನರೂಪದಲ್ಲಿ ಅವರ ತನಯನಾಗಿ ಆವಿರ್ಭವಿಸಿದ ಘಟನೆಗಳನ್ನು ವಿವರಿಸಿದನು. ಅದರ ನಂತರ ಭಗವಂತನು ಪ್ರಾಕೃತ ಶಿಶುವಿನ ಆಕಾರವನ್ನು ಧರಿಸಿದನು. ಭಗವಂತನ ಅಸೀಮವಾದ ಐಶ್ವರ್ಯದ ಕಾರಣವಾಗಿ ಸಂಭ್ರಮ ಜ್ಞಾನದಿಂದ ಕೂಡಿದ ಮಾತಾಪಿತರನ್ನು ವಾತ್ಸಲ್ಯರಸದ ಮೂಲಕವಾಗಿ ಅನುಗ್ರಹಿಸುವ ಸಲುವಾಗಿ ಭಗವಂತನು ತನ್ನ ಆತ್ಮಮಾಯೆಯನ್ನು ಅವಲಂಬಿಸಿ ಸಾಧಾರಣ ಶಿಶುವಿನ ರೂಪದಲ್ಲಿ ಪ್ರಕಟನಾದನು. ಭಗವಂತನ ಆದೇಶದಂತೆ ವಸುದೇವನು ಬಾಲಕ ಶ್ರೀಕೃಷ್ಣನನ್ನು ಎದೆಗಪ್ಪಿಕೊಂಡು ನಂದಗೋಕುಲಕ್ಕೆ ಹೊರಟಲ್ಲಿ, ಅದೇ ಸಮಯಕ್ಕೆ ಸರಿಯಾಗಿ ಯಶೋದೆಯ ಗೃಹದಲ್ಲಿ ಯೋಗಮಾಯೆಯು ಜನಿಸಿದಳು. (ಭಾ. 10.3.47). ಯೋಗಮಾಯೆಯು ಆವಿರ್ಭವಿಸಿದಂತೆ ಕಂಸನ ಕಾರಾಗೃಹದ ಪ್ರಹರಿಗಳು ಹಾಗೂ ಮಧುರಾವಾಸಿಗಳೆಲ್ಲರೂ ಗಾಢವಾದ ನಿದ್ರೆಯನ್ನು ಹೊಂದಿದರು. ಭಗವಂತನನ್ನು ಹೃದಯದಲ್ಲಿ ಧರಿಸಿದ ಮಾತ್ರದಲ್ಲಿ ಕಾಮ, ಕ್ರೋಧ, ಲೋಭಾದಿಗಳು ದೂರೀಭೂತವಾಗಿ ವಿಷಯವಾಸನೆಯ ರೂಪವಾದ ಲೋಹದ್ವಾರಗಳು ಉನ್ಮುಕ್ತವಾಗುವಂತೆ ಭಗವಂತನನ್ನು ಎತ್ತಿಕೊಂಡು ಹೊರಟ ವಸುದೇವನ ಕೈಬೇಡಿ–ಕಾಲಬೇಡಿಗಳು ಮುಕ್ತವಾದವು, ಕಾರಾಗೃಹದ ದ್ವಾರಗಳೂ ನಗರದ ರಾಜದ್ವಾರಗಳೂ ತಾನಾಗಿ ತೆರೆದು ಕೊಂಡವು. ವಸುದೇವನ ಮಡಿಲಲ್ಲಿ ಭಗವನ್ಮೂರ್ತಿಯನ್ನು ಕಂಡು ಅಜ, ಭವ, ಇಂದ್ರಾದಿಗಳು ಸ್ತುತಿಗೈಯಲಾರಂಭಿಸಿದರು. ಶಂಕಿತಚಿತ್ತದಿಂದ ನಿಶ್ಶಬ್ದವಾಗಿ ಗೋಕುಲಕ್ಕೆ ನಡೆದ ವಸುದೇವನನ್ನು ಪುರವಾಸಿಗಳ ದೃಷ್ಟಿಯಿಂದ ರಕ್ಷಿಸುವ ಸಲುವಾಗಿ ದೇವೇಂದ್ರನು ಮುಸಲಧಾರೆಯಾಗಿ ಮಳೆಯನ್ನು ಆರಂಭಿಸಿದನು. ಭಗವಂತನನ್ನು ಮಳೆಯಿಂದ ಕಾಯುವದಕ್ಕಾಗಿ ಆದಿಶೇಷನು ವಸುದೇವನ ಹಿಂದಿನಿಂದ ಅಲಕ್ಷಿತವಾಗಿ ನಡೆದು ತನ್ನ ಫಣೆಯನ್ನು ಛತ್ರಾಕಾರವಾಗಿ ಹಿಡಿದನು. ಭಗವಂತನನ್ನು ನಂಬಿದವರು ಎಂದಿಗೂ ದಾರಿತಪ್ಪಲಾರರು. ಇದನ್ನು ತಿಳಿಸುವ ಸಲುವಾಗಿ ಪಥವು ತಾನಾಗಿ ಪ್ರಶಸ್ತವಾಗಿ ವಸುದೇವನನ್ನು ಆಹ್ವಾನಿಸುತ್ತಿತ್ತು. ಆಕಾಶದಲ್ಲಿ ಆಗಾಗ ಮಿಂಚು ಹೊಳೆಯುತ್ತಿದ್ದು ಅಂಧಕಾರದಲ್ಲಿ ದಾರಿಯನ್ನು ಕಾಣಿಸುತ್ತಿತ್ತು. ಪ್ರಬಲವಾದ ಮಳೆಯಿಂದ ಉಕ್ಕೇರಿ ಹರಿಯುತ್ತಿದ ಯಮುನಾನದಿಯನ್ನು ದಾಟುವ ಉಪಾಯವನ್ನರಿಯದೆ ವಸುದೇವನು ನದಿಯತೀರದಲ್ಲಿ ನಿಂತಿದ್ದಂತೆ, ಶ್ರೀಕೃಷ್ಣನ ಶ್ರೀಚರಣಗಳನ್ನು ಸ್ಪರ್ಶಿಸುವ ಲೋಭದಿಂದ ಯಮುನೆಯು ಅಧಿಕವಾಗಿ ಮೇಲೇರತೊಡಗಿದಳು. ವಸುದೇವನು ಇದರಿಂದಾಗಿ ಗಾಭರಿಗೊಂಡನು. ಯಮುನೆಯನ್ನು ಶಾಂತಗೊಳಿಸುವ ಸಲುವಾಗಿ ಶ್ರೀಕೃಷ್ಣನು ತನ್ನ ಪಾದದಿಂದ ನದಿಯನ್ನು ಸ್ಪರ್ಶಿಸಲಾಗಿ ಶಾಂತಿಯನ್ನು ಹೊಂದಿದ ನದಿಯು ಕ್ರಮವಾಗಿ ಕೆಳಗಿಳಿಯುತ್ತ ಬಂದಳು. ತ್ರೇತಾಯುಗದಲ್ಲಿ ಸಮುದ್ರರಾಜನು ಶ್ರೀರಾಮಚಂದ್ರನಿಗೆ ದಾರಿಯನ್ನು ಬಿಟ್ಟು ಕೊಟ್ಟಂತೆ ಯಮುನೆಯು ಶ್ರೀಕೃಷ್ಣನನ್ನು ಎದೆಯಲ್ಲಿ ಧರಿಸಿ ನಡೆದ ವಸುದೇವನಿಗೆ ಸುಖಕರವಾದ ದಾರಿಯನ್ನು ನೀಡಿದಳು. ಅಲ್ಲಿಂದ ಮುನ್ನಡೆದ ವಸುದೇವನು ನಂದರಾಜನ ಆಲಯವನ್ನು ತಲುಪಿ ಯಶೋದೆಯ ಸೂತಿಕಾಗೃಹವನ್ನು ಸೇರಿದನು. ಭಗವಂತನ ಇಚ್ಛೆಯಂತೆ ವ್ರಜವಾಸಿಗಳೆಲ್ಲರೂ ಯೋಗಮಾಯೆಯ ಪ್ರಭಾವದಿಂದ ನಿದ್ರಾಗ್ರಸ್ತರಾಗಿದ್ದರು. ಯಶೋದೆಯ ಮಡಿನಲ್ಲಿ ವಿದ್ಯುದ್ವರ್ಣದಿಂದ ಶೋಭಿಸುತ್ತಿದ್ದ ಬಾಲಿಕೆಯು ತನ್ನ ಅಂಗಪ್ರಭೆಯಿಂದ ಗೃಹವನ್ನು ತುಂಬಿದ್ದಳು. ವಸುದೇವನು ತನ್ನ ಬಾಲಕನನ್ನು ಅಗಲಲಾರದೆ ಭಾರವಾದ ಮನಸ್ಸಿನಿಂದ ಬಾರಿಬಾರಿಯಾಗಿ ಚುಂಬಿಸುತ್ತ ಸಜಲನಯನಗಳನ್ನು ಒರೆಸಿಕೊಳ್ಳುತ್ತ, ಕೊನೆಗೆ ಯಶೋದೆಯ ಹಾಸಿಗೆಯಲ್ಲಿ ಬಾಲಕನನ್ನು ಇರಿಸಿ ಬಾಲಿಕೆಯಾದ ಮಹಾಮಾಯೆಯನ್ನು ಎತ್ತಿಕೊಂಡು ಮಧುರಾಪುರಿಯ ದಿಕ್ಕಿನಲ್ಲಿ ಹೊರಟನು. ರಾತ್ರಿಯು ಅಂತ್ಯವಾಗುವ ಮುನ್ನವೇ ವಸುದೇವನು ಯಥಾಕ್ರಮವಾಗಿ ನಡೆದು ಕಂಸನ ಕಾರಾಗೃಹವನ್ನು ಸೇರಿದಂತೆ ಊರಿನದ್ವಾರ, ಕಾರಾಗೃಹದ ದ್ವಾರ, ಶೃಂಖಲೆಗಳು ಇವೆಲ್ಲವೂ ಮೊದಲಿನಂತೆಯೇ ಬಂಧಿತವಾದವು. ಮಾಯೆಯನ್ನು ಹೃದಯದಲ್ಲಿ ಧರಿಸಿದವರು ಸರ್ವದಾ ಜಾಗತಿಕ ಬಂಧನದೊಳಗೆ ಇರುವರೆಂಬುದಕ್ಕೆ ಇದು ಉಚಿತವಾದ ಪ್ರಮಾಣವಾಗಿದೆ. ಬಾಲಕನಾದ ಶ್ರೀಕೃಷ್ಣನನ್ನು ಗೋಕುಲದಲ್ಲಿ ಸುರಕ್ಷಿತವಾಗಿ ಇರಿಸಿದ ವಿಷಯದಲ್ಲಿ ವಸುದೇವನು

ಆನಂದಿತನಾದರೂ, ಯಶೋದಾಪುತ್ರಿಯ ಪ್ರಾಣರಕ್ಷಣೆಯಲ್ಲಿ ಅಕ್ಷಮನಾಗಿ ಚಿಂತಿಸತೊಡಗಿದನು.

ಭಗವಂತನ ಆದೇಶದಂತೆ ಪರಾಶಕ್ತಿಯಾದ ಯೋಗಮಾಯೆಯು ತನ್ನ ಅಂಶದೊಂದಿಗೆ ಯಶೋದೆಯ ಪುತ್ರಿಯಾಗಿ ಜನಿಸಿದ್ದಳು. ಯೋಗಮಾಯೆಯು ಭಗವಂತನ ನಾನಾವಿಧವಾದ ವ್ರಜ ಲೀಲೆಗಳನ್ನು ಸಾಧಿಸುವ ಸಲುವಾಗಿ ವ್ರಜಧಾಮದಲ್ಲಿ ನೆಲೆಯಾದಳು ಹಾಗೂ ಯೋಗಮಾಯೆಯ ಅಂಶವಾದ ಮಹಾಮಾಯೆಯನ್ನು ವಸುದೇವನು ಮಥುರಾಪುರಿಗೆ ಕೊಂಡೊಯ್ದನು. ಮಹಾಮಾಯೆಯು ವ್ರಜಧಾಮವನ್ನು ತ್ಯಜಿಸಿದುದಕ್ಕೆ ಅರ್ಥವೇನೆಂದರೆ, ಭಗವಂತನಾದ ಶ್ರೀಕೃಷ್ಣನು ಆವಿರ್ಭವಿಸುವವರೆಗೂ ಭಕ್ತರ ಹೃದಯಗಳಲ್ಲಿ ಮಾಯಾಭಾವವು ನೆಲೆಸಿರುತ್ತದೆ. ಭಗವಂತನು ಪ್ರಕಟವಾದ ನಂತರ ಭಕ್ತರ ಹೃದಯದಲ್ಲಿನ ಮಾಯಾಭಾವವು ತೊಲಗುವುದು. ಈ ಮಹಾಮಾಯೆಯನ್ನು ಮಾಯಾಬದ್ಧರಾದ ಜನರು ಜಾಗತಿಕ ಪ್ರಯೋಜನದ ಸಲುವಾಗಿ ಪೂಜಿಸುತ್ತಾರೆ.

ಅಷ್ಟಮೀ ತಿಥಿಯ ರಾತ್ರಿಯು ಮುಗಿಯುವ ಮುನ್ನವೇ ವಸುದೇವನು ಕಂಸನ ಕಾರಾಗೃಹವನ್ನು ತಲುಪಿದನು. ಅಷ್ಟಮಿಯ ಕ್ಷೀಣ ಚಂದ್ರಮನೂ ಅರ್ಧಗಗನದಲ್ಲಿಯೇ ತನ್ನ ತೇಜಸ್ಸನ್ನು ಕಳೆದುಕೊಂಡು ದುಃಖದಿಂದ ಮ್ಲಾನವದನನಾಗಿದ್ದನು. ಯಶೋದೆಯ ಬಾಲಿಕೆಯು ಕಂಸನ ಕಾರಾಗೃಹವನ್ನು ಸೇರಿದ ಒಡನೆಯೇ ಜೋರಾಗಿ ಅಳಲಾರಂಭಿಸಿದಳು. ತನ್ನ ಜನ್ಮದ ವಾರ್ತೆಯನ್ನು ಕಂಸನಿಗೆ ತಿಳಿಸುವುದೇ ಮಾಯೆಯ ಉದ್ದೇಶವಾಗಿತ್ತು. ಕ್ರಂದಿಸುವ ಕನ್ಯೆಯನ್ನು ಸಂತೈಸಲು ದೇವಕಿಯು ಗೈದ ಪ್ರಯತ್ನಗಳೆಲ್ಲವೂ ವಿಫಲವಾದವು. ರೋದನಧ್ವನಿಯಿಂದ ಹಠಾತ್ತಾಗಿ ಜಾಗೃತರಾದ ಕಾರಾಗಾರರಕ್ಷಕರು ಒಡನೆಯೇ ಕಂಸನಲ್ಲಿಗೆ ತೆರಳಿ ದೇವಕಿಯು ಸಂತಾನವು ಜನಿಸಿದ ವಿಷಯವನ್ನು ಕಂಸನಲ್ಲಿ ನಿವೇದಿಸಿದರು. ದೇವಕಿಯ ಅಷ್ಟಮಪುತ್ರನು ತನ್ನ ಪ್ರಾಣನಾಶವನ್ನು ಗೈಯುವನೆಂಬ ಭಯದಿಂದ ಕಂಸನು ಸರ್ವಕ್ಷಣವೂ ದ್ವೇಷಭಾವದಿಂದ ಹರಿಯನ್ನೇ ನೆನೆಯುತ್ತಿದ್ದನು. ದೂತರಿಂದ ದೇವಕಿಯ ಸಂತಾನದ ವಿಷಯವಾಗಿ ತಿಳಿದ ಕಂಸನು ತರಾತುರಿಯಿಂದ ಕಾರಾಗೃಹದ ಕಡೆಯಲ್ಲಿ ಓಡಿದನು. ಕಿರೀಟವಿಹೀನವಾದ ತಲೆ, ಮುಕ್ತಕೇಶ, ಸ್ಖಲಿತವಸ್ತ್ರದಿಂದ ಅವ್ಯವಸ್ಥಿತನಾದ ಕಂಸನು ಪದೇಪದೇ ಏಳುತ್ತ ಬೀಳುತ್ತ ಕಾರಾಗೃಹವನ್ನು ಸೇರಿದನು. ಅಲ್ಲಿ ದೇವಕಿಯ ಮಡಿಲಲ್ಲಿದ್ದ ನವಸಂತಾನವನ್ನು ಕಂಡು ಕ್ರೂರನಾದ ಕಂಸನು ಬಲಾತ್ಕಾರದಿಂದ ಕಸಿದುಕೊಂಡನು. ಕನ್ಯೆಯ ಪ್ರಾಣಭಿಕ್ಷೆಯನ್ನು ಯಾಚಿಸಿ ದೇವಕಿಯು ಅತ್ಯಂತ ದೀನಭಾವದಿಂದ ಗೈದ ಪ್ರಾರ್ಥನೆಯು ಕಲ್ಲು ಬಂಡೆಯ ಮೇಲೆ ನೀರು ಸುರಿದಂತೆ ವ್ಯರ್ಥವಾಯಿತು. ಅಭಕ್ತನೂ, ವಿಷಯ ಮದಾಂಧನೂ ಆದ ಕಂಸನು ಕನ್ಯಾಶಿಶುವಿನ ಪಾದಗಳನ್ನು ಹಿಡಿದು ಮೊದಲಿನ ಶಿಶುಗಳನ್ನು ವಧಿಸಿದಂತೆ ಕಲ್ಲಿನ ಮೇಲೆ ಎಸೆದನು. ಆದರೆ, ಸಾಕ್ಷಾತ್ತಾದ ಮಾಯಾದೇವಿಯನ್ನು ಯಾರೇನು ಮಾಡಬಲ್ಲರು? ಶಿಶುವು ಭೂಮಿಗೆ ಬೀಳದೆ, ಕಂಸನ ತಲೆಯಲ್ಲಿ ಪದಾಘಾತವನ್ನು ಗೈದು ಅಂತರಿಕ್ಷಕ್ಕೆ ಏರಿತು. (ಕಂಸಾಸುರಸ್ಯೋತ್ತಮಾಂಗೇ ಪಾದಂ ದತ್ವಾ ಗತಾ ದಿವಂ ಇತಿ – ಭವಿಷ್ಯಪುರಾಣ). ಕೋಟಿ ವಿದ್ಯುತ್ತುಗಳನ್ನು ನಿಂದಿಸುವ ಅಪೂರ್ವ ಕಾಂತಿಯಿಂದ ಮಾಯಾದೇವಿಯು ಆಕಾಶದಲ್ಲಿ ಶೋಭಿಸುತ್ತಿದ್ದಳು. ದೇವಿಯ ಅಷ್ಟಭುಜಗಳಲ್ಲಿ ಧನು, ಶೂಲ, ಬಾಣ, ಚರ್ಮ, ಖಡ್ಗ, ಶಂಖ, ಚಕ್ರ ಹಾಗೂ ಗದೆಗಳು ಆಯುಧರೂಪವಾಗಿ ಕಂಗೊಳಿಸುತ್ತಿದ್ದವು. ಸ್ವರ್ಣಸೂತ್ರ ಖಚಿತವಾದ ನೀಲವಸನವನ್ನು ಧರಿಸಿದ ದೇವಿಯು ಪುಷ್ಪಮಾಲೆಗಳನ್ನು ಧರಿಸಿ ಚಂದನ, ಅಗುರು, ಕಸ್ತೂರಿ ಮೊದಲಾದವುಗಳ ಲೇಪನ ಹಾಗೂ ಮಣಿಮಾಣಿಕ್ಯ ಖಚಿತವಾದ ದಿವ್ಯಾಭರಣಗಳಿಂದ ಶೋಭಿಸುತ್ತಿದ್ದಳು. ಸ್ವರ್ಗಲೋಕದ ದೇವತೆಗಳು ದೇವಿಯ ಸ್ತುತಿಗಳನ್ನು ಗೈಯುತ್ತ ವಿವಿಧ ಉಪಹಾರಗಳನ್ನು ಸಮರ್ಪಿಸುತ್ತಿದ್ದರು. ಈ ಸಮಯದಲ್ಲಿ ಮಹಾಮಾಯೆಯು ಗಂಭೀರವಾದ ಸ್ವರದಿಂದ ಕಂಸನಲ್ಲಿ ಈ ರೀತಿಯಾಗಿ ನುಡಿದಳು– "ಅರೇ ಮೂರ್ಖನಾದ ಕಂಸನೆ, ನನ್ನನ್ನು ವಧಿಸಲು ವೃಥಾಪ್ರಯತ್ನವನ್ನು ಮಾಡಿ ನೀನೇನನ್ನು ಸಾಧಿಸುವೆ? ನಿನ್ನ ಪೂರ್ವಶತ್ರುವಾದ ಶ್ರೀಹರಿಯು ಶತ್ರುವಾಗಿಯೇ ಅವತರಿಸಿರುವನು. ಇನ್ನು ಮೇಲೆ ನಿನ್ನನ್ನು ರಕ್ಷಿಸುವವರು ತ್ರಿಭುವನಗಳಲ್ಲಿ ಯಾರೂ ಇರುವುದಿಲ್ಲ. ವಸುದೇವನನ್ನೂ, ದೇವಕಿಯನ್ನೂ, ಯಾದವರನ್ನೂ ವೃಥಾ ಹಿಂಸಿಸಿದಲ್ಲಿ ನೀನು ಅನಿಷ್ಟವನ್ನೇ ಹೊಂದುವೆ". ಅನಂತರ ಮಾಯಾದೇವಿಯು ಅಂತರ್ಧಾನಳಾದಳು.

ಅನಂತಪಾರವಾದ ಶ್ರೀಕೃಷ್ಣಲೀಲೆಯ ವಿಷಯವಾಗಿ ವೈಷ್ಣವಾಚಾರ್ಯರು ಬಹು ವಿಸ್ತೃತವಾದ ಭಾಷ್ಯಗಳನ್ನೂ, ಟೀಕೆಗಳನ್ನೂ ನೀಡಿದವರು. ಶ್ರೀಕೃಷ್ಣಜನ್ಮದ ವಿಷಯವಾಗಿ ಅದರ ಕೆಲವಂಶ ಮಾತ್ರವನ್ನು ಇಲ್ಲಿ ಕೊಡಲಾಯಿತು. ಭಗವಂತನಲ್ಲಿ ಶ್ರದ್ಧೆಯಿಂದ ಕೂಡಿದ ಪಾಠಕರ ಚಿತ್ತಗಳು ಭಗವತ್ಕಥಾಮೃತದ ಸೇವನೆಯಿಂದ ಶುದ್ಧವಾಗಿ ಭಕ್ತಿಯನ್ನು ಭಗವತ್ಪ್ರೇಮವನ್ನೂ ಗಳಿಸಿ ಪರಮಾನಂದವನ್ನು ಪಡೆಯುತ್ತವೆ. ★

**ಯುವವಾಣಿ**

# ಕುಮಾರವ್ಯಾಸನ ಕೃಷ್ಣರಾಯಭಾರ

ಭಾರತವನ್ನು ವ್ಯಾಸರು ಸಂಸ್ಕೃತದಲ್ಲಿ ಬರೆದು ಜಗತ್ತಿಗೆ ನೀಡಿದ್ದಾರೆ. ಕನ್ನಡದಲ್ಲಿ ಇದು ಸುಲಭವಾಗಿ ಸಾಮಾನ್ಯರಿಗೂ ಹೃದಯ ಮುಟ್ಟಲೆಂದು ಗದುಗಿನ ನಾರಣಪ್ಪನು ನಿರೂಪಿಸಿದ್ದಾನೆ. ಕುಮಾರವ್ಯಾಸ ಎಂಬ ಹೆಸರು ಗದುಗಿನ ವೀರನಾರಾಯಣಸ್ವಾಮಿಯ ಈ ಕಿಂಕರನಿಗೆ ಪರಿಶೋಭಿಸುವುದು. ಗದುಗಿನ ಭಾರತವು ಕನ್ನಡದ ಸಾಹಿತ್ಯ ಕೃತಿಗಳಲ್ಲಿಯೇ ಅನರ್ಘ್ಯರತ್ನ ಎಂಬ ಮಾತಿನಲ್ಲಿ ಸಂಶಯಕ್ಕೆ ಎಡೆಯಿಲ್ಲ. ಇದು ನಿಜಕ್ಕೂ "ಕಾವ್ಯಕೆ ಗುರು". ಪ್ರಸ್ತುತ ಕೃಷ್ಣರಾಯಭಾರ ಉದ್ಯೋಗ ಪರ್ವದಲ್ಲಿ ಬರುತ್ತದೆ.

ಕೌರವರಾಯನು ಶ್ರೀಕೃಷ್ಣನನ್ನು ತನಗೆ ಅನುಕೂಲನನ್ನಾಗಿಸಿಕೊಳ್ಳಬೇಕೆಂದು ದ್ವಾರಾವತಿಗೆ ಹೊರಡುವನು. ಇದನ್ನು ತಿಳಿದ ಧರ್ಮರಾಜನು ಅರ್ಜುನನನ್ನು ಅದೇ ಉದ್ದೇಶದಿಂದ ಕಳುಹಿಸಿದನು. ಅರ್ಜುನ ಶ್ರೀಕೃಷ್ಣನನ್ನು ಪರಮ ಭಕ್ತಿಯಿಂದ ಸ್ತೋತ್ರಮಾಡುತ್ತ ಅರಮನೆಯನ್ನು ಪ್ರವೇಶಿಸಿದನು. ಶ್ರೀಹರಿ ನಿದ್ರಾಲೋಲನಾಗಿದ್ದುದರಿಂದ ಎಚ್ಚರಿಸಲಾಗದೆ ಅವನ ಪಾದದ ಬಳಿ ಕುಳಿತನು. ಸ್ವಲ್ಪ ಹೊತ್ತಿನಲ್ಲಿಯೇ ಕೃಷ್ಣನು ಎದ್ದು ಕಾಲಬಳಿಯಲ್ಲಿ ಕುಳಿತಿದ್ದ ಅರ್ಜುನನನ್ನೂ ನಂತರ ತಲೆಯ ಬಳಿಯಲ್ಲಿ ಕುಳಿತಿದ್ದ ದುರ್ಯೋಧನನನ್ನೂ ನೋಡಿದನು. ಉಪಚಾರದ ನಂತರ ಬಂದ ಕಾರ್ಯವೇನೆಂದು ಕೇಳಿ ಸಹಾಯಕ್ಕೆ ಒಪ್ಪಿದನು. ಮೊದಮೊದಲು ಸೋದರರ ವ್ಯಾಜ್ಯ ಒಗೆಹರಿಸಲು ಹವಣಿಸಿದನು. ಆದರೆ ದುರ್ಯೋಧನನು ಯುದ್ಧದ ಹಟ ಹಿಡಿದುದರಿಂದ ನಿರುಪಾಯನಾದನು. ಕೊನೆಗೆ ಯಾದವ ಮಹಾ ಸೈನ್ಯವನ್ನು ಕೌರವರಾಯನು ಬೇಡಿಕೊಂಡನು. ಬಡವರಾದ ನಮಗೆ ನೀವೇ ಬೆಂಬಲವಾಗಿರೆಂದು ಅರ್ಜುನನು ಬಿನ್ನವಿಸಲು ಕೃಷ್ಣನು ಅದಕ್ಕೆ ಒಪ್ಪಿದನು. ಏನಿದ್ದರೂ ಅವನು 'ಶರಣ ದೈಹಿಕ ದೈವ'. ತನ್ನ ಬಿರುದನ್ನು ಎಂದೂ ಹುಸಿಗೊಡುವವನಲ್ಲ. ಸುಯೋಧನನೊಡನೆ ಯುದ್ಧ ತಪ್ಪಿಸಲು ಹೆಣಗಿದ. ಕೌರವನ ಅರಮನೆಗೆ ಆ ನಿಮಿತ್ತದಿಂದ ಹೊರಟ. ಅವನ ರೀತಿ ಅನುಪಮವೇ.

ಮೊದಲು ಕೃಷ್ಣನು ವಿದುರನ ಮನೆಗೆ ಬಂದನು. ಎಂತಹ ರೂಪ ಅವನದು! ಸಿರಿಮೊಗ, ಕೆಂಧೂಳಿ ಸೋಂಕಿದ ಸಿರಿಮುಡಿ, ಕುಡಿಮೀಸೆ, ತರುಣ ತುಲಸಿಯ ಆಭರಣದ ಆ ದೇವರನ್ನು ಕಂಡು ವಿದುರ ಹರ್ಷಾತಿರೇಕದಲ್ಲಿ ಹುಚ್ಚೆದ್ದು ಹರಿದ. 'ಅದಿರಲಿ ನನ್ನ ಹಸಿವೆಯ ಪರಿ ನಿನಗಿಲ್ಲ' ಎಂದು ಕೃಷ್ಣ ನುಡಿದು ಅಡಿಗೆಯ ಮನೆಯ ಹಾಲನ್ನು ಕುಡಿದು ಹಸಿವೆಯ ನೂಕಲು ಹವಣಿಸಿದ. ಆ ಗಲಭೆಯಲ್ಲಿ ಸೂರಾಡಿದ ಹಾಲು ಸಾಗರವಾಗಿ ನಗರ ವ್ಯಾಪಿಸಿ ಕೌರವರಾಯನ ಅರಮನೆ ಕೂಡ ತಲುಪಿತು. ಎಂಥ ಪವಾಡ! ಅಚ್ಚರಿಗೊಂಡ ಭೀಷ್ಮಾದಿಗಳು ಮುರಹರನನ್ನು ಮನವಾರೆ ಹೊಗಳಿದರು.

**ಎನ್. ಎಸ್. ಗದಗಕರ**

ಅನಂತರ ಶ್ರೀಹರಿ ಕುಂತೀದೇವಿಯನ್ನು ಕಂಡು ಯೋಗಕ್ಷೇಮ ವಿಚಾರಿಸಿದ. ಆಕೆ ಪ್ರತಿಯಾಗಿ ಯಾದವಕುಲದ ಸಮಾಚಾರಗಳನ್ನು ವಿಚಾರಿಸಿದಳು. ಎಲ್ಲ ವಿವರಿಸಿ ಕೃಷ್ಣ ತಾನು ಬಂದಿರುವ ರಾಯಭಾರದ ವಿಚಾರ ಅರುಹಿದನು. ಕುಂತಿ ಹಿರಿ ಹಿರಿ ಹಿಗ್ಗಿದಳು.

ಕೌರವರಾಯನ ಆಸ್ಥಾನಕ್ಕೆ ಮರುದಿನ ಶ್ರೀಕೃಷ್ಣನ ಸಂದರ್ಶನವಿದ್ದಿತು. ಧೃತರಾಷ್ಟ್ರಭೂಪಾಲ ಅಂದು ಸತೀಸಹಿತ ಸಿಂಹಾಸನದಲ್ಲಿದ್ದ. ಅನೇಕ ಮಾಂಡಳಿಕ ಅರಸರು ಎಡಬಲದಲ್ಲಿಯೂ ಬಳಿಯಲ್ಲಿ ಸುಯೋಧನ ಅವನ ಸೋದರರು, ಕರ್ಣ, ವಿದ್ವಾಂಸರು, ವೀರರು ಕುಳಿತು ಆ ಸಭೆಗೆ ಕಳೆ ತಂದಿದ್ದರು. ಕುರುರಾಯನ ಆಸ್ಥಾನವು ಅಂಬುಜಮುಖಿಯರಿಂದ ಕೋಮಲಾಂಗಿಯರಿಂದ ಕಂಗೊಳಿಸುತ್ತಿತ್ತು.

ಅಸುರಾರಿ ಕುರುರಾಯನ ಓಲಗಕ್ಕೆ ಬರುವ ರೀತಿ ಅಪ್ರತಿಮವಾದುದು. ಇಭಪುರದ ಬೀದಿಗಳು ಜನಸಹಿತ ಪುನೀತವಾದುವು. ರಾಜಾಧಿರಾಜರ ಮಕುಟಗಳು ಶ್ರೀಹರಿಯ ಪಾದವನ್ನಾವರಿಸಿದಾಗ ಏನು ಹೇಳ! ನಾವೆಲ್ಲ ಇಂದು ಧನ್ಯರು ಎಂದು ರಾಜಕುಲ ಹರ್ಷಿಸಿತು. ಆಗ ಭೀಷ್ಮರು ಪರಮಾತ್ಮನನ್ನು ಅರ್ಘ್ಯಪಾದ್ಯಗಳಿಂದ ಉಪಚರಿಸಿದರು. ಸಮಸ್ತ ರಾಜರು ಜಯ ಜಯಕಾರ ಮಾಡುವಾಗ ಕುರುರಾಯನೊಬ್ಬ ತನ್ನ ಪೀಠದಲ್ಲಿದ್ದು ಮಿಸುಕಲಿಲ್ಲ. ಆಗ ಕೃಷ್ಣನು ಬೇಕೆಂತಲೇ ಅವನಿಗೆ ವಿನಯ ಕಲಿಸಲು ಧಾರುಣಿಯನ್ನು ಉಂಗುಟದಿಂದ ಒತ್ತಲು ಕುರುರಾಯನ ರತ್ನಖಚಿತ ಸಿಂಹಾಸನ ಪೀಠದ ಗೊಣಸು ಮುರಿಯಿತು. ಎಲ್ಲೆಡೆ ಹಾಹಾಕಾರ. ಕುರುರಾಯನೂ ಇಳೆಗೊರಗಿದ. 'ಸುರಸಂದಣಿಗಳು ಆ ಎನೆ ಕವಿದುಬಿದ್ದನು ಹರಿಯ ಚರಣದಲಿ'. (ಇಲ್ಲಿ ಭವಿಷ್ಯಸೂಚನೆಯೂ ಶ್ರೀ ಕೃಷ್ಣನ ಸರ್ವಸೂತ್ರಧಾರತ್ವವೂ ನಾರಣಪ್ಪನಿಂದ ಯಶಸ್ವಿಯಾಗಿ ಚಿತ್ರಸಲ್ಪಟ್ಟಿದೆ ಎನ್ನಬೇಕು.) 'ಛೆ! ಇದೇನಿದು.



ನೀನು ಇಲ್ಲಿಗೆ ಬರುವ ಕಾರಣವಿರಲಿಲ್ಲ ನಾನೇ ಬಂದು ಹರಸುತ್ತಿದ್ದೆ' ಎಂದು ನುಡಿದು ಕೃಷ್ಣ ಅವನನ್ನು ಎತ್ತಿದನು. ಕೃಷ್ಣನು ಆಚಾರ ವಿಚಾರ ಅರಿತವ. ಕುರುರಾಜನ ಯೋಗಕ್ಷೇಮ ವಿಚಾರಿಸಿ ಕೊಂಡ. ಸಮಾಧಾನ ಮಾಡಿದ. ಆಗ ಕೌರವ ತನ್ನ ಚಿಂತೆಯನ್ನು ವಿಸ್ತರಿಸಿದ. 'ಸ್ವಾಮಿ, ತಾವು ಬರುವಿರೆಂದು ನಾನು ವಿಜೃಂಭಣೆಯಿಂದ ಅಡಿಗೆ ಯನ್ನು ಅಣಿಗೊಳಿಸಿದ್ದೆ. ಆದರೆ ತಾವು ವಿದುರನ ಮನೆಯ ಉಂಡಿರಿ. ಎಷ್ಟಾದರೂ ನಿಮ್ಮದು ಕೆಳ ವಟ್ಟದ ಸಂಸ್ಕೃತಿ. ಕೃಪ, ದ್ರೋಣ, ಭೀಷ್ಮರಲ್ಲಿ ಉಣ್ಣದೆ, ತೊತ್ತಿನ ಮಗನ ಮನೆಯಲ್ಲಿ ಉಂಡಿರಿ' ಎಂದ. ಇದನ್ನು ಕೇಳಿ ವಿದುರನು ತಪ್ತನಾಗಿ ಮುಂದೆ ಕುರುಕ್ಷೇತ್ರದ ಕಾಳಗದಲ್ಲಿ ಸುಯೋಧ ನನ್ನು ಉಳಿಸಬೇಕೆಂದು ಇರಿಸಿದ ಧನುವನ್ನು ಮುರಿದು ಚೆಲ್ಲಿದನು. ಎಲ್ಲರಿಗೂ ದುಃಖ ಆವರಿಸಿತು. ಕೃಷ್ಣ ಹೊರಗೆ ಹರ್ಷಿಸದೆ ಮನದಿ ನಕ್ಕು ಪಾಂಡವರ ಕುತ್ತು ಅನಾಯಾಸ ಪರಿಹಾರ ವಾಯಿತೆಂದುಕೊಂಡನು. ಸ್ವತಃ ದುರ್ಯೋಧನನಿಗೆ ತನ್ನ ಮೂರ್ಖತನದ ಮಾತಿಗೆ ಪಶ್ಚಾತ್ತಾಪ ವಾಯಿತು. ಆದರೆ ಮಾತು ಆಡಿ ಆಗಿದ್ದಿತು. ಮುತ್ತು ಒಡೆದು ಹೋಗಿದ್ದಿತು. ಕೊನೆಗೆ ಕೃಷ್ಣ ಊಟ ಮಾಡದೆ ಹೋದದ್ದಕ್ಕೆ ಕಾರಣ ತಿಳಿಸಿದನು. 'ನೀವು ಅಹಿತರು, ಅಪ್ರಿಯರು. ಇಂತಹವರಲ್ಲಿ ಉಣ್ಣಬಾರದೆಂದು ರಾಜನೀತಿಯುಂಟು'.

ಎಪ್ಪತ್ತೆರಡು ನುಡಿಗಳ ಈ ಎಂಟನೆಯ ಸಂಧಿ ಯಲ್ಲಿ ಕುಮಾರವ್ಯಾಸನ ವರ್ಣಕ ಶೈಲಿಗೆ ಹಲವಾರು ನಿದರ್ಶನಗಳು ದೊರೆಯುವುವು. ಕೃಷ್ಣನು ವಿದುರನ ಮನೆಗೆ ಬರುವ ಪಾಂಗು ದರ್ಶನೀಯ.

ಸಿರಿ ಮೊಗದ ಕಿರುಬೆಮರ ತೇಜಿಯ
ಖುರಪುಟದ ಕೆಂಧೂಳಿ ಸೋಕಿದ
ಸಿರಿ ಮುಡಿಯ ಕುಡಿಮೀಸೆಯಲಿ ಕೆಂಪಡರ್ದ
ರೋಮಗಳ
ಖರಮರೀಚಿಯ ಜಳಕೆ ಬಾಡಿದ
ತರುಣ ತುಲಸಿಯ ದಂಡೆಯೊಪ್ಪುವ
ಗರುವ ದೇವನ ಬರವ ಕಂಡನು ಬಾಗಿಲಲಿ
ವಿದುರ

ಹೀಗೆಯೇ ಶ್ರೀಕೃಷ್ಣನ ಬರವು ವಿದುರನಲ್ಲಿ ಹರುಷದ ಹೊಳೆಯನ್ನೇ ಹರಿಸಿತು. ಅವನು ಹುಚ್ಚೆದ್ದು ಭಕ್ತಿಯ ಪರಾಕಾಷ್ಠೆಯಲ್ಲಿ ಹರಿದಾ ಡಿದ.

ಕೂಡೆ ಕುಣಿದನು ಮನೆಯ ಮುರಿದೀ
ಡಾಡಿದನು ಮೈಮರೆವ ಹರುಷದ
ಗಾಡಿಕೆಯಲಪ್ರತಿಮನೆಸೆದನೊ ಭಕುತಿ
ಕೇಳಿಯಲಿ

ಕುಂತೀದೇವಿಗೆ ಆಕೆಯ ಪರಿವಾರದಯೋಗ ಕ್ಷೇಮ ಕೇಳುವುದು, ಆಕೆ ಪ್ರತಿಯಾಗಿ ಶ್ರೀಕೃಷ್ಣನ ಬಂಧುವರ್ಗದ ಸುಕ್ಷೇಮ ಕೇಳುವುದು – ಹೀಗೆ ಅಸಂಖ್ಯಾತ ವಿವರಗಳನ್ನೊಳಗೊಂಡಿದೆ ಈ ಪ್ರಸಂಗ. ಶ್ರೀಕೃಷ್ಣನು ಬರುವನೆಂಬ ಸುದ್ದಿ ತಿಳಿಯಲು ಏನು ವಿಜೃಂಭಣೆ ಕುರುರಾಯನ ನಗರ ಸಭಾಂಗಣದಲ್ಲಿ !–

ಜಾಳಿಸಿತು ತಮ ಮೂಡಣಾದ್ರಿಯ
ಮೇಲೆ ತಲೆದೋರಿದನು ರವಿ ಭೂ
ಪಾಲ ಕೌರವನಂದಿನೊಡ್ಡೋಲಗವ
ರಚಿಸಿದನು

ಕೌರವರಾಯನ ಸಭೆ – ಮಂತ್ರಿಗಳು – ತರ್ಕ ಪುರಾಣ ಕಾವ್ಯ ಪಂಡಿತರು ಬಹುಭಾಷಾ ವಿಶಾ ರದ ಕವಿಗಳು, ವಾಗ್ಮಿಗಳು, ಗಮಕಿಗಳು, ಭಟ ಸಂದೋಹ – ಇವುಗಳಿಂದ ಮೆರೆಯಿತು.

ಸುಯೋಧನನ ಅರಮನೆಗೆ ಬರುವ ಶ್ರೀಕೃಷ್ಣನ ನಡಿಗೆಯಲ್ಲಿ ಕುಮಾರವ್ಯಾಸ ಸಮಗ್ರವಾದ ಭಗ ವಂತನ ಚರಿತ್ರೆಯನ್ನೇ ಕಂಡ. ಕಂಜಸಂಭವಪಿತ, ನಂಜಿನಲಿ ಪವಡಿಸಿದವ, ದೈತ್ಯ ಕುಲವನದಾವ, ಅಘಹಾರಿ, ಭಕ್ತವತ್ಸಲ, ಕರುಣಿ, ದುರಿತದುರ್ಗ ವಿಭಾಡ, ಕ್ಷೀರವಾರಿಧಿಶಯನ, ವಾರಿಜೋದರ, – ಇನ್ನೂ ಹೀಗೆ ಎಷ್ಟು ಬಣ್ಣಿಸಿದರೂ ಅವನಿಗೆ ತೃಪ್ತಿಯಿಲ್ಲ:

ಕೊನೆಗೆ ತೀರ ನಾಟಕೀಯ ಸನ್ನಿವೇಶ ಎಂದರೆ ಧರಣಿಪತಿ ಸಿಂಹಾಸನದಿಂದ ಉರುಳುವುದು, ಅವನನ್ನು ಮುರವೈರಿ ಎತ್ತಿ ಸನ್ಮಾನಿಸುವುದು. 'ಎಲ್ಲ ಹಿರಿಯರ ಮನೆಗೆ ಹೋಗದೆ – ಭೀಷ್ಮ, ಕೃಪ, ದ್ರೋಣರುಗಳ ಮನೆಗೆ ಹೋಗದೆ – ತೊತ್ತಿನ ಮಗ ವಿದುರನ ಮನೆಯಲ್ಲಿ ಉಂಡದ್ದು, ಹೀನ ಕುಲದವರಿಗೆ ಸಲ್ಲುವಂತದ್ದು' ಎಂದಾಗ ವಿದುರನ ಕಣ್ಣು ಕಿಡಿ ಸೂಸಿದವು. ಕೌರವನನ್ನು ಮುಂದೆ ಉಳಿಸಲು ಇರಿಸಿದ ಧನುವನ್ನು ಅವನು ಲಟಲಟ ಮುರಿಯಲು ಹಾಹಾಕಾರ.

ಧನು ಮುರಿಯೆ ಗಾಂಧಾರಿಗತ ಲೋ
ಚನರು ಮಮ್ಮಲ ಮರುಗಿದರು ಭೂ
ಪನ ದುಗುಡ ಮಿಗಿಲಾಯ್ತು ಭೀಷ್ಮ
ದ್ರೋಣರಳಲಿದರು

ಅದದ್ದೇ ನೆಟ್ಟಗಾಯಿತೆಂದು ಮುರವೈರಿ ನಲಿ ದನಂತೆ.

'ಸಾಭಾವನ ಮುಥೋತ್ಪ್ರೇಕ್ಷಾ ಪ್ರಕೃತಸ್ಯ ಪರೇಣ ಯತ್' ಎಂಬುದಾಗಿ ಉತ್ಪ್ರೇಕ್ಷಾಲಂಕಾರ ವನ್ನು ಕುರಿತು ಹೇಳುವುದುಂಟು. ಕುಮಾರವ್ಯಾಸ ನಿಗೆ ಈ ಅಲಂಕಾರ ಅತಿಪ್ರಿಯ. ತೀರ ಲೀಲಾ ಜಾಲವಾಗಿ ಇದನ್ನು ಬಳಸಿ ಅವನು ವಾತಾವರಣ ದಲ್ಲಿ ಹೊಸ ರಂಗು ತರುವನು. ಚಮತ್ಕೃತಿಗೆ ಎಡೆ ಕಲ್ಪಿಸಿ ಕೊಡುವನು. 'ಶಶಿಯ ಬಿಂಬವ ಹಳಿವ ಹುರುಡಿಸುಪಂಬುಜ ಮುಖಿಯರು, ಕೌರವ ವಾರಿಧಿಯ ಮುಕ್ಕುಳಿಸಲೋಸುಗ ಬಂದ, ಧಾರು ಣಿಯ ಹೊರೆಯಿಳಿಸಲೋಸುಗ ಬಂದ, ಮರಿ ಮಿಂಚುಗಳ ಮುಗಿಲೀವಂತೆ ಭುವಿಗೆ, – ಕೆಲವು ನಿದರ್ಶನಗಳು. ನಿರಾಯಾಸವಾಗಿ ಕವಿ ಅತಿಶ ಯೋಕ್ತಿಗೆ ಮೊರೆಹೋಗುವುದುಂಟು. ಮನೆಯ ಮುರಿದೀಡಾಡಿದನು ವಿದುರ, ಕರಣದಲ್ಲಿ ಕೋಪಾ ಗ್ನಿಯುಕ್ಕಲು, ತತ್ಸಭಾಮಂಡಲ ಮಹಾಂಬು ಧಿಯ ನುಡಿದೆರೆಯ ತನಿಗಡಣ ವಡಗಿರಲು – ಇವು ಕೆಲವು ಮಾದರಿ. ಶಬ್ದಾಲಂಕಾರಗಳಗಂತೂ ಕೊನೆಯಿಲ್ಲ ; ಕಾಣಿಕೆಯ ಕೊಂಡನು ಕೊಟ್ಟನು ಡುಗೊರೆಯ, ಸಿರಿಮೊಗದ ಕಿರುಬೆಮರ, ಗರುವ ದೇವನ ಬರವ, ಕಲಿಮಲದಿ ಹೊಗಲಿಸಿ, ಭಂಜ ನೆಗೆ ಬಲುದೈವ ಬಂದನು, ದುರಿತದುರ್ಗ ವಿಭಾಡ ಬಂದನು, ನೀಲಾಚಲ ನಿಕಾಯ, ತತ್ಕುಮತಿ ಕೌರವ, ಮಣಿಯದಾತನ ಕಾಣುತ, ಹಸಿವ ನೂಂಕಿದನು ಹಾಲಲಿ, ಕುರುಪತಿಯ ಬಿರುನುಡಿ, ತೊಳೆದ ದಶನಮಯೂಖತತಿ ಹೊಳೆ ಹೊಳೆಯೆ, – ಇಂತಹ ಅಸಂಖ್ಯ ನಿದರ್ಶನಗಳನ್ನು ಕೊಡ ಬಹುದು.

ಹೀಗೆ ರಾಯಭಾರ ಪ್ರಸಂಗದಲ್ಲಿ ಕುಮಾರ ವ್ಯಾಸನ ನಿರೂಪಣಾಚಾತುರ್ಯವನ್ನು ಅವಲೋ ಕಿಸಿ ಹರ್ಷಿಸಬಹುದು. ಮುಖ್ಯವಾಗಿ ಆತ ಭಕ್ತಿ ರಸದ ಪುರಸ್ಕರ್ತ. ಕೃಷ್ಣನ ಬಗ್ಗೆ ಅವನಿಗೆ ಅಲೌಕಿಕ ಗೌರವ. ಅವನ ಬಿರುದುಗಳನ್ನು ಏನೆಂದು, ಎಷ್ಟೆಂದು ಹೊಗಳಿದರೂ ಬೇಸರವಿಲ್ಲ. ಕುಮಾರವ್ಯಾಸನು ಬರಿಯ ವೇದಾಭ್ಯಾಸ ಜಡನಲ್ಲ. ಅವನು ತತ್ತ್ವಜ್ಞಾನಿ ನಿಜ; ಆದರೆ ಲೌಕಿಕವನ್ನು ಅರಿತ ರಾಜಕಾರಣಿ ರಾಜನೀತಿಯ ತತ್ತ್ವಗಳು ಈ ಸಂಧಿಯಲ್ಲಿ ನಮಗೆ ವಿಧಿತವಾಗು ವುವು. ಕಾವ್ಯಗುಣದೊಡನೆ, ನಾಟಕೀಯತೆ, ಚಿತ್ರಕಶಕ್ತಿ, ಕವಿಗೆ ವಶವರ್ತಿ ಆಗಿವೆ. ಶಬ್ದ ಅರ್ಥಾಲಂಕಾರಗಳಂತೂ ಸರಿಯೇ ಸರಿ. ಮನು ಕುಲದ ಹೃದಯವನ್ನರಿತ ಮಹಾನುಭಾವ ಕುಮಾರವ್ಯಾಸನೆನ್ನಲು ಇದೊಂದು ಕಿರುಸಾಕ್ಷಿ ಯಷ್ಟೆ.



# ಕಿಶೋರ ಜಗತ್

## ಚೈತನ್ಯಪ್ರಭು



ಶ್ರೀಕೃಷ್ಣ ಭಕ್ತಿ ಸಾಮ್ರಾಜ್ಯವನ್ನು ಪ್ರಪಂಚದಲ್ಲಿ ಸ್ಥಾಪಿಸಿದ ಮಹಾಪುರುಷರ ಪಂಕ್ತಿಯಲ್ಲಿ ಶ್ರೀಕೃಷ್ಣಚೈತನ್ಯರು ಅಗ್ರಗಣ್ಯರು. ಶ್ರೀಕೃಷ್ಣಮೂರ್ತಿಯ ಪಾದಾರವಿಂದಗಳಲ್ಲಿ ಅನಿರ್ವಚನೀಯವಾದ ಪ್ರೇಮಾಮೃತ ವರ್ಷವನ್ನು ಸುರಿಸಿ ಆತನ ದಯೆಗೆ ಪಾತ್ರರಾದ ಪುಣ್ಯಪುರುಷರು ಇವರು. ವಂಶಪಾರಂಪರ್ಯವಾದ ಪ್ರತಿಷ್ಠೆ, ಐಶ್ವರ್ಯಗಳನ್ನು ಕೂಡ ತ್ಯಜಿಸಿ ಶ್ರೀಕೃಷ್ಣಸ್ವಾಮಿಯಲ್ಲಿ ನೆಲೆಸಿದ ಚಿತ್ತವುಳ್ಳವರಾಗಿ ಜನತೆಯ ಹೃದಯದಲ್ಲಿ ನಿಂತ ಮಹಾಮಹಿಮರು.

ಪಂಡಿತರಿಂದ ಸುಶೋಭಿತವಾಗಿ ದೊಡ್ಡ ಅಗ್ರಹಾರದಂತೆ ಪ್ರಕಾಶಿಸುತ್ತಿದ್ದ 'ನವದ್ವೀಪ' ಎಂಬ ಪಟ್ಟಣದಲ್ಲಿ 'ಜಗನ್ನಾಥ ಮಿಶ್ರ, ಶಚೀದೇವಿ' ಎಂಬ ಸದ್ದಂಪತಿಗಳು ಸಂತೋಷದಿಂದ ಸಂಸಾರಯಾತ್ರೆಯನ್ನು ಸಾಗಿಸುತ್ತಿದ್ದರು. ಅವರಿಗೆ ಎಂಟು ಮಂದಿ ಹೆಣ್ಣು ಮಕ್ಕಳು ಜನಿಸಿದರೂ ದುರ್ದೈವವಶಾತ್ ಒಂದೂ ದಕ್ಕಲಿಲ್ಲ. ಒಂಭತ್ತನೆಯ ಗರ್ಭದಲ್ಲಿ ವಿಶ್ವರೂಪನೆಂಬ ಗಂಡು ಮಗುವಾಗಿ, ಅವನು ತನ್ನ ಹದಿನಾರನೇವಯಸ್ಸಿನಲ್ಲಿ ಮದುವೆ ಪ್ರಯತ್ನ ನಡೆಯುತ್ತಿದ್ದಾಗಲೇ ಸಂಸಾರದಲ್ಲಿ ವಿರಕ್ತಿಗೊಂಡು ವಿರಾಗಿಯಾಗಿ ಮನೆಯಿಂದ ಹೊರಟು ಸನ್ಯಾಸ ಸ್ವೀಕರಿಸಿದ. ಹತ್ತನೆಯ ಮಗುವಾಗಿ ಅಪೂರ್ವ ತೇಜಸ್ವಿಯಾದ ಗಂಡು ಶಿಶುವು ಜನಿಸಿ 'ವಿಶ್ವಂಬರ' ನೆಂಬ ಹೆಸರಿನಿಂದ ಬೆಳೆಯಿತು. ಜಗನ್ನಾಥಮಿಶ್ರ ಮಗನನ್ನು ಗುರುಕುಲವಾಸಕ್ಕೆ ಸೇರಿಸಿದ. ಹುಡುಗನಿಗೆ ಬುದ್ಧಿ ಬಹು ತೀಕ್ಷ್ಣವಾಗಿದ್ದುದರಿಂದ ನಾಲ್ಕಾರು ವರ್ಷಗಳಲ್ಲೇ ನ್ಯಾಯ, ವ್ಯಾಕರಣ, ಶಾಸ್ತ್ರಗಳ ಅಭ್ಯಾಸವನ್ನು ಮಾಡಿದ ಕೇವಲ ಇಪತ್ತು ವರ್ಷ ವಯಸ್ಸಿನೊಳಗಾಗಿಯೇ ಆರು ಶಾಸ್ತ್ರಗಳ ಬಹುಸೂಕ್ಷ್ಮ ವಿಚಾರಗಳನ್ನು ಪರಿಶೋಧಿಸಿ, ಬಹು ಮೇಧಾವಿ ಎಂದು ಪ್ರಸಿದ್ಧನಾಗಿ ಒಂದು ಸಂಸ್ಕೃತ ಪಾಠಶಾಲೆಯಲ್ಲಿ ಮುಖ್ಯ ಅಧ್ಯಾಪಕನೂ ಆದ. ಸುಪ್ರಸಿದ್ಧ ಪಂಡಿತರೊಂದಿಗೆ ಸಮುಕೀತದಲ್ಲಿ ಕಲಿತು ವಾದಿಸಿ ವಿಜಯ ಪತ್ರಿಕೆಗಳನ್ನು ಸಂಪಾದಿಸುವುದರ ಜೊತೆಗೆ ತರ್ಕಶಾಸ್ತ್ರಪಾರಂಗತನಾಗಿ ಅದ್ವಿತೀಯನೆಂಬ ಪ್ರಖ್ಯಾತಿಯನ್ನೂ ಗಳಿಸಿದ. ಮಾತಾ ಪಿತೃಗಳನ್ನು ಸುಖಸಂತೋಷದಲ್ಲಿರುವಂತೆ ಮಾಡಿದ.

ವಿಶ್ವಂಭರನಿಗೆ ಅದೇ ಊರಿನ ವಲ್ಲಭಾಚಾರ್ಯನೆಂಬ ಪಂಡಿತನ ಮಗಳಾದ 'ಲಕ್ಷ್ಮಿ' ಎಂಬ ಕನ್ಯಾಮಣಿಯ ಜೊತೆ ವಿಜೃಂಭಣೆಯಿಂದ ವಿವಾಹ ನಡೆಯಿತು. ಇತರ ಪಂಡಿತರಂತೆಯೇ ಅನೇಕ ಮಂದಿ ವಿದ್ಯಾರ್ಥಿಗಳನೆ ಮನೆಯಲ್ಲಿ ಪಾಠಹೇಳಿ, ವಿದ್ವತ್ಸಭೆಗಳಲ್ಲೂ ಭಾಗವಹಿಸಿ ಪ್ರತಿಷ್ಠೆಯಿಂದ ಸಂಸಾರ ರಥವನ್ನು ಸುಖವಾಗಿ ಸಾಗಿಸುತ್ತಿದ್ದನು.

ದೇಶಸಂಚಾರಕ್ಕೆಂದು ಹೊರಟು ಕೆಲವೇ ದಿನಗಳಲ್ಲಿ ಪೂರ್ವ ಬಂಗಾಳದ ಅನೇಕ ಸ್ಥಳಗಳಲ್ಲಿ ಪಂಡಿತರನ್ನು ಸೋಲಿಸಿ ಅನೇಕ ಬಿರುದು ಬಾವಲಿಗಳನ್ನು ಗಳಿಸಿದ. ಈ ಮಧ್ಯೆ ಲಕ್ಷ್ಮೀದೇವಿ ತೀರಿಕೊಂಡಳು. ವಿಷ್ಣುಪ್ರಿಯಾ ಎನ್ನು ಹೆಸರಿನ ಕನ್ಯೆಯನ್ನು ಪುನಃ ವಿವಾಹನಾಗಿ ಸುಖವಾಗಿಯೇ ಜೀವನ ಸಾಗಿಸುತ್ತಿರಲು ಅವನ ತಂದೆ ಜಗನ್ನಾಥ ಮಿಶ್ರನು ತೀರಿಕೊಂಡ. ಪಿತೃಋಣ ತೀರಿಸಲು ಮಹಾಕ್ಷೇತ್ರವಾದ ಗಯೆಗೆ ಹೋಗಿ ಶ್ರಾದ್ಧಮಾಡಿ ಪಿತೃಗಳಿಗೆ ಪಿಂಡ ಪ್ರದಾನ ಮಾಡಿ, ಗದಾಧರ ಮೂರ್ತಿಯನ್ನು ಆರಾಧಿಸುತ್ತಿರುವಾಗಲೇ ವಿಶ್ವಂಭರನ ಮನಸ್ಸು ಭಗವದ್ವಿಚಾರದ ಕಡೆ ಹೊರಳಿತು. ಅದೇ ಈತನ ಜೀವನದ ಪರಿವರ್ತನ ಸಮಯವೂ ಆಯಿತು. ಕೇವಲ ಬುದ್ಧಿ ಪ್ರದರ್ಶಕವಾದ ತರ್ಕವಾದಗಳ ವಾತಾವರಣ ಮಹಿಮೆಯಿಂದ ಗೋರ್ಕಲ್ಲಿನಂತೆ ಕಠಿಣವಾಗಿದ್ದ ಈತನ ಹೃದಯವು ಆ ದಯಾಮಯ ಮೂರ್ತಿಯ ದರ್ಶನದಿಂದ ಚಂದ್ರಕಾಂತ ಶಿಲೆಯಾಗಿ ಮಾರ್ಪಟ್ಟಿತು. ಅದೇ ಸಂದರ್ಭದಲ್ಲೇ ಈತನಿಗೆ 'ಈಶ್ವರಪುರಿ' ಎಂಬೊಬ್ಬ ಸ್ವಾಮಿಗಳ ದರ್ಶನವೂ ಆಯಿತು. ಇವರು ಮಾಧವೇಂದ್ರಪುರಿಯವರ ಶಿಷ್ಯರು. ಮಾಧವೇಂದ್ರರು 1೪ ನೆಯ ಶತಮಾನದಲ್ಲಿ ಉಡುಪಿಯಲ್ಲಿ ಅವತರಿಸಿ ದ್ವೈತಸಿದ್ಧಾಂತವನ್ನು ಸ್ಥಾಪಿಸಿದ ಶ್ರೀಮನ್ಮಧ್ವಾಚಾರ್ಯ ಸಂಪ್ರದಾಯದ ಒಬ್ಬ ಸಂನ್ಯಾಸಿಗಳು. ಇವರು ಜನಸಮೂಹದಲ್ಲಿ ಶ್ರೀಕೃಷ್ಣ ಭಕ್ತಿಯನ್ನು ಹೆಚ್ಚಿಸುವುದರಲ್ಲಿ ಯಶಸ್ವಿಗಳಾಗಿದ್ದರು.

ಶಿಷ್ಯನ ಬೇಡಿಕೆಯಂತೆ ಈಶ್ವರಪುರಿಯವರು ಭಕ್ತಿಪಂಥದ ಮುಖ್ಯ ತತ್ತ್ವಗಳನ್ನುಪದೇಶಿಸಿ ಭಾಗವತ ಗ್ರಂಥ ರತ್ನವನ್ನು ಪರಿಚಯ ಮಾಡಿಸಿದರು. ಈ ಗ್ರಂಥಪಠನೆಯಿಂದ ವಿಶ್ವಂಭರನಿಗೆ ತಾನು ಮಹಾವಿದ್ವಾಂಸನೆಂಬ ವಿದ್ಯಾಮದವು ಎಲ್ಲೋ ಓಡಿಹೋಯಿತು. ವಿನಯ ವಿಧೇಯತೆಯುಂಟಾಗಿ, ದಯೆಯೂ ಉತ್ಪನ್ನವಾಯಿತು. ನೋಡಿದುದೆಲ್ಲವೂ ದೈವೀಭಾವನೆಯಿಂದಲೇ ತೋರಸಾಗಿತು. ಭಗವಚ್ಚೈತನ್ಯ ಹೃದಯ ಮಂದಿರಕ್ಕೆ ಪ್ರವೇಶಿಸಿದೊಡನೆ ಆ ಶಕ್ತಿಯ ರಭಸ

ಶ್ರೀಮತಿ ಪ್ರೇಮಲೀಲಾ ನಾರಾಯಣಮೂರ್ತಿ

# ದಯಾಮಯ

ದಯಾಮಯನ ಕಣ್ತುಂಬ ಕಂಡ ಜೀವಕೆ
ಬಂತು ಸ್ವಾಂತನ
ಏಳುಬೆಟ್ಟಗಳೊಡೆಯನೈತಂದು ಕಂಬನಿ ಒರೆಸಿ
ನಡೆವ ಸಮಾಧಾನ
ಅದರಿಂದ ಮೈದಾಳಿಬಂದ ಭಕ್ತಿಯ ಅನಂತದ
ಅಲೆಯಲಿ ನಿದಾನ
ಹರಿಯುತಲಿದೆ ದಿಗ್ ದಿಗಂತಗಳನೆಣಿಸಿ
ರಾಮನಾಮ ಮಹಾನ
ವಿರಾಟರೂಪಿಯಾಗಿ ನಿಂತು ಕೈಬಿಸಿ ಬೀಸಿ
ಕರೆವ ಆತನ ಸುಗಾನ
ತಾನತಾನವಾಗಿ ಬರುತಲಿದೆ ಓಂಕಾರ ಪ್ರಣೀತ
ಛಂದ ಬಹುಮಾನ
ನಿನ್ನ ದಯೆ ತಣ್ಣನೆಯ ಹುಣ್ಣಿಮೆಯ ಬೆಳದಿಂಗಳು
ನಿನ್ನ ಕಂಗಳ ಕಾಂತಿ ಸೂರ್ಯ ಚಂದ್ರರ ಕಾಂತಿ
ನಿನ್ನ ಹೃದಯ ಸಿರಿಯ ವತ್ಸ ಲಾಂಛನ ದಿವ್ಯ
ನಿನ್ನ ಕರಯುಗ ಭವ್ಯ ಕಲಿಯುಗಕೆ ಅಭಯಕರ
ನಿನ್ನ ಸೌಂದರ್ಯ ಕೋಟಿಸೂರ್ಯರ ಅಪರಾವತಾರ
ಹೇ ದೇವಾ ನಿನ್ನ ಕಲ್ಯಾಣ ನಿತ್ಯಕಲ್ಯಾಣವಯ್ಯ
ನಿನ್ನ ಗಿರಿ ಗುಹೆಗಳಲಿ ತಂಪಾದ ತೆಳುಗಾಳಿ
ಹಿತಮಿತದ ಮಳೆ ಚಿಗುರು ಚಿಗರೆಗಳ ಒಡನಾಟ
ತವ ಪ್ರೇಮ ಪ್ರತಿಮೆಗಿದೊ ಶತ ಶತ ನಮಸ್ಕಾರ

**- ನುಗ್ಗೆಹಳ್ಳಿ ರಂಗನಾಥ್**



ವನ್ನು ತಾಳಲಾರದೆ ಹುಚ್ಚನಂತೆ ಅಲೆಯ ತೊಡಗಿದ- ಕೆಡುಕನ್ನು ಮಾಡಿದವನಿಗೂ ಒಳಿತನ್ನೇಮಾಡುವ ಪರೋಪಕಾರಬುದ್ಧಿ ಈತನಲ್ಲಿ ಬೇರೂರಿತು. ಭಗವದ್ಗುಣ ವರ್ಣನೆಯ ಕವಿತಾ ಪ್ರವಾಹವು ಕೀರ್ತನೆ ಗಳ ಮೂಲಕ ಹೃದಯದಿಂದ ಹೊಮ್ಮಿ ಮೃದುಮಧುರ ಕಂಠದಿಂದ ಹೊರ ಬರು ತ್ತಿತ್ತು. ಕೆಲವೊಮ್ಮೆ ಭರಿಸದ ಭಕ್ತಿಯ ಉದ್ರೇಕದಲ್ಲಿ ನರ್ತನವೂ ಆರಂಭವಾಗು ತ್ತಿತ್ತು. ಈ ರೀತಿಯ ದಿವ್ಯಕವಿತೆ, ಗಾಯನ, ನರ್ತನ ಎಂಥ ಕಠಿಣ ಹೃದಯನ್ನು ಕರ ಗಿಸಿ ಪ್ರೇಮದ್ರವವನ್ನು ಹೊರಡಿಸಿ ಬಿಡು ತ್ತಿತ್ತು. ಇಂಥ ಸಂಕೀರ್ತನೆಯಲ್ಲಿ ಜಾತಿ, ಮತ ಭೇದಗಳಲ್ಲದೆ ದೊಡ್ಡವರು, ಚಿಕ್ಕ ವರು, ಪಂಡಿತರು ಪಾಮರರು ಎಲ್ಲರೂ ಸೇರುತ್ತಿದ್ದರು. ಈ ರೀತಿ ದಿನದಿನಕ್ಕೂ ಹೆಚ್ಚುತ್ತಿದ್ದ ಈತನ ಶಿಷ್ಯ ಸಮೂಹವನ್ನು ಕಂಡು ಸಹಿಸದ ಕೆಲವು ದ್ವೇಷಿಗಳು ಯಾವ ಬಗೆಯ ಅಪವಾದ ಭಯಭೀತಿಗಳಿಗೂ ಮಣಿಯದ ಇವನನ್ನು ರಾಜಾಜ್ಞೆಯಿಂದ ಬಾಯಿ ಮುಚ್ಚಿಸಬೇಕೆಂದು ಯೋಚಿಸಿ ನವದ್ವೀಪದ ನ್ಯಾಯಾಧಿಪತಿಯ ಬಳಿಗೆ ಹೋಗಿ ದೂರಿತ್ತರು. ಇವರ ಪ್ರಾರ್ಥ ನೆಗೆ ಮರುಳಾದ ಆತ– ಇನ್ನುಮುಂದೆ ಬಹಿ ರಂಗದ ರಸ್ತೆಗಳಲ್ಲಿ ಗದ್ದಲಮಾಡುತ್ತ ನಾಗ ರಿಕರಿಗೆ ತೊಂದರೆ ಮಾಡಿದರೆ ಸರ್ಕಾರದ ದಂಡನೆಗೆ ಗುರಿಯಾಗಿ ಬೇಕಾಗುತ್ತದೆಂದು ಸಂಕೀರ್ತನ ಮಂಡಲಿಯವರಿಗೆ ಒಂದು ಆಜ್ಞಾಪತ್ರ ಕಳುಹಿಸಿದ. ಅದನ್ನು ಕಂಡು ವಿಶ್ವಂಭರನು ಬೆದರದೆ ಶಿಷ್ಯ ಸಮೂಹದೊ ಡನೆ 'ಆತನ ಸಮ್ಮುಖದಲ್ಲೇ ಅದ್ಭುತ ಸಂಕೀರ್ತನೆ ನಡೆಸಿದ. ಆ ಸಂಕೀರ್ತನೆ ಯಿಂದ ದಿಗ್ಭ್ರಾಂತನಾದ ಆತ ಆಜ್ಞಾ ಪತ್ರ ಹಿಂದಕ್ಕೆ ತೆಗೆದುಕೊಂಡು ಅವರಿಗೆ ಮನಬಂದಂತೆ ನಡೆದುಕೊಳ್ಳಬಹುದೆಂದು ತಿಳಿಸಿದ. ಇದಕ್ಕೂ ಸೋಲದ ವಿರೋಧಿಗಳು, ಘಾತಕರಿಂದ ಇವರಿಗೆ ಕಲ್ಲೇಟು ಹೊಡೆಯು ವಂತೆ ಮಾಡಿದರು, ಆದರೂ ಪ್ರೇಮಯ ದೃಷ್ಟಿಯುಳ್ಳ ಈ ಸಾಧುವರ್ಯರು ಘಾತ ಕರ ಹೃದಯವನ್ನು ಕರಗಿಸಿ ಅವರನ್ನೂ ಶಿಷ್ಯರನ್ನಾಗಿ ಸ್ವೀಕರಿಸಿದರು. ಇವರು ಸನ್ಯಾ

ಸಾಶ್ರಮ ಸ್ವೀಕರಿಸುವ ನಿರ್ಧಾರ ಮಾಡಿ ಕೊನೆಗೆ 'ಶ್ರೀಕೇಶವ ಭಾರತಿ' ಯತಿಗಳಿಂದ ಸನ್ಯಾಸವನ್ನು ಸ್ವೀಕರಿಸಿ 'ಶ್ರೀಕೃಷ್ಣ ಚೈತನ್ಯ' ಎಂಬ ನೂತನ ನಾಮವನ್ನು ಹೊಂದಿದರು. ಇವರು ಸನ್ಯಾಸ ಸ್ವೀಕರಿಸಿದ ಸುದ್ದಿ ತಾಯಿ ಶಚೀದೇವಿಗೆ ತಿಳಿದೊಡನೆ ಆಕೆ ಚಿಂತಾಕ್ರಾಂತಳಾಗಲು ಆಕೆಯನ್ನೂ ಸಮಾಧಾನ ಮಾಡಿದರು.

ಶ್ರೀಕೃಷ್ಣಚೈತನ್ಯರು ದೇಶದಾದ್ಯಂತ ಭಗವನ್ನಾಮ ಸುಧಾರಸವರ್ಷವನ್ನು ಸುರಿಸಲೋಸುಗ ತೀರ್ಥಯಾತ್ರೆಯನ್ನು ಕೈಗೊಂಡರು. ಆರಂಭದಲ್ಲಿ ದಕ್ಷಿಣದೇಶದ ಕಡೆ ಇವರ ಪ್ರಯಾಣ ಹೊರಟಿತು. ಅಲ್ಲಿನ ಅಸಾಮಾನ್ಯ ದೇವಾಲಯಗಳನ್ನೂ, ಭಕ್ತಿಯೇ ಮೂರ್ತಿವೆತ್ತಂತ ಕಳಾಭರಿತ ದೇವಮೂರ್ತಿಗಳನ್ನೂ ಸಂದರ್ಶಿಸಿ ಪುಣ್ಯನದಿಗಳಲ್ಲಿ ಮಿಂದರು. ಜೊತೆಗೆ ಮಾತೆಯ ಮಡಿಲಲ್ಲಿ ಹರುಷೋತ್ಸಾಹದಿಂದ ನಲಿಯುತ್ತಿರುವ ಗಂಗಾದೇವಿಯ ಸಹಜನರ್ತನವನ್ನು ಕಡಲಿನ ಏರಿಳಿತಗಳಲ್ಲಿ ಕಂಡರು. ಭಕ್ತಿ ಪಂಥದ ಶ್ರೇಷ್ಠತೆಯ ವಿಷಯದಲ್ಲಿ ವಾದ ಮಾಡಲು ಬಂದ ಅನೇಕ ಮಂದಿ ಪಂಡಿತರು ಇವರ ಅಗಾಧ ತರ್ಕಶಾಸ್ತ್ರ, ಪಾಂಡಿತ್ಯ ಹಾಗೂ ಅದ್ವಿತೀಯ ಭಕ್ತಿ ಪ್ರಭಾವದ ಪ್ರತ್ಯಕ್ಷ ದರ್ಶನದಿಂದ ಪರಾಜಿತರಾಗಿ ತಮ್ಮ ಪಂಥಗಳನ್ನು ತ್ಯಜಿಸಿ ವೈಷ್ಣವ ಪಂಥದ ಭಕ್ತರಾಗಿ ಅವರ ಶಿಷ್ಯವೃಂದದಲ್ಲಿ ಸೇರಿ ಹೋದರು.

ಇವರು ಪ್ರಯಾಣ ಉತ್ತರಕಡೆ ನಡೆಯಬೇಕೆಂದು ಸಂಕಲ್ಪಿಸಿದ್ದಾಗ ಇವರ ಭಕ್ತನೆನಿಸಿದ ಒರಿಸ್ಸಾ ದೇಶದರಾಜ ಪ್ರತಾಪರುದ್ರದೇವನೆಂಬುವನು ಪ್ರಯಾಣಕ್ಕೆ ವಸ್ತು ಸಾಮಾಗ್ರಿಗಳನ್ನೂ ವಾಹನಗಳನ್ನು ಸಿದ್ಧಗೊಳಿಸಿದರೂ, ಬಯಸದೆ ಕಾಲ್ನಡಿಗೆಯಲ್ಲಿಯೇ ಕಾಶೀಕ್ಷೇತ್ರವನ್ನು ಸೇರಿದರು. ಅಲ್ಲಿಂದ ಶ್ರೀಕೃಷ್ಣಮೂರ್ತಿಯ ಲೀಲಾಕ್ಷೇತ್ರವಾಗಿದ್ದ ಪ್ರಯಾಗ, ಮಧುರೆ, ಗೋಕುಲ, ಬೃಂದಾವನ ಮುಂತಾದ ಕ್ಷೇತ್ರಗಳಲ್ಲಿ ಸಂಚರಿಸಹೊರಟರು. ಅಲ್ಲಿ ಸಂಚರಿಸುತ್ತಿದ್ದಾಗ ಭಾವ ಪರವಶರಾಗಿ ಒಮ್ಮೊಮ್ಮೆ ಬಹಿರ್ಪ್ರಜ್ಞೆಯೂ ಇಲ್ಲದೆ ಅಂತರ್ಮುಖರಾಗಿಯೇ ಇದ್ದು ಬಿಡುತ್ತಿದ್ದರು. ಒಮ್ಮೆ ನಾಲ್ಕು ಮಂದಿ ಶಿಷ್ಯರು ಗುರುಗಳ ಸುತ್ತ ಕುಳಿತು ಅವರು ಬಹಿರ್ಮುಖರಾಗುವುದನ್ನೇ ವೀಕ್ಷಿಸುತ್ತಿರುವಷ್ಟರಲ್ಲಿ, ಆ ಮಾರ್ಗವಾಗಿ ಬಂದ ಕೆಲಮಂದಿ ಮಹಮದೀಯ ಸೈನಿಕರು ಮಲಗಿದ್ದವನು ಮಾರ್ಗಸ್ಥನೆಂದೂ, ಸುತ್ತಲೂ ಕುಳಿತಿದ್ದವರು ಕಳ್ಳರೆಂದೂ ಭಾವಿಸಿ ಅವರನ್ನು ಸೆರೆ ಹಿಡಿಯುವಷ್ಟರಲ್ಲಿ ಚೈತನ್ಯರಿಗೆ ಬಹಿರ್ಪ್ರಜ್ಞೆಯುಂಟಾಗಿ, 'ಅವರನ್ನು ಸೆರೆಹಿಡಿಯ ಬೇಡಿ ನಾನೊಬ್ಬ ಸನ್ಯಾಸಿ ಅವರೆಲ್ಲಾ ನನ್ನ ಆಪ್ತರು' ಎಂದು ತಿಳಿಸಿದರು. ಆ ಮಹಮ್ಮದೀಯ ಸೈನಿಕರಲ್ಲೊಬ್ಬರು ಮಹಮ್ಮದೀಯ ಗ್ರಂಥಗಳನ್ನೋದಿ ವಿಚಾರ ತಿಳಿದಿದ್ದರು. ಅವರು ಚೈತನ್ಯರ ಧ್ಯಾನಮಗ್ನ ಸ್ವರೂಪವನ್ನು ಕಂಡು ಬೆರಗಾಗಿ ಅವರ ಬಳಿಗೆ ಸಾಗಿ ಮತವಿಚಾರದ ಬಗ್ಗೆ ಕೆಲವು ಪ್ರಶ್ನೆಗಳನ್ನು ಹಾಕಿ ಅವರಿಂದ ಸ್ವಲ್ಪ ಮಾತ್ರ ವಿಚಾರ ತಿಳಿಯುವಷ್ಟರಲ್ಲಿಯೇ ಮಹದೀಯರೆಲ್ಲರೂ ಭಕ್ತಿ ಪಂಥವನ್ನು ಸ್ವೀಕರಿಸಿ ಇವರ ಶಿಷ್ಯರಾಗಲು ಒಪ್ಪಿಕೊಂಡರು. ಇವರಿಗೆ 'ಪಠಾಣ ವಿರಾಗಿಗಳು' ಎಂದು ಹೆಸರಾಯಿತು.

ಮಹಾಪ್ರತಾಪಿ, ಭಗವದ್ಭಕ್ತನಾದ ರಾಜ ಪ್ರತಾಪರುದ್ರನು ಚೈತನ್ಯಪ್ರಭುವರ್ಯರ ಕೀರ್ತಿ ಕೇಳಿ ಅವರ ದರ್ಶನ ಪಡೆಯಲಾಶಿಸಿ ಅವರನ್ನು ರಾಜಧಾನಿಗೆ ಬಿಜಯಂಗೈಯ್ಯಬೇಕೆಂದು ತನ್ನವರನ್ನು ಕಳುಹಿಸಿ ಪ್ರಾರ್ಥಿಸಿದ. ಅದಕ್ಕೆ ಚೈತನ್ಯರು ಒಪ್ಪಲಿಲ್ಲ. ಆದರೂ ಆಕಸ್ಮಿಕವಾಗಿ ಚೈತನ್ಯರು ನಾಮಸಂಕೀರ್ತನೆ ಮಾಡುತ್ತಾ ಅರಮನೆಯ ಮುಂದೆ ಹೋಗುತ್ತಿದ್ದಾಗ ರಾಜನು ಬಂದು ದೀರ್ಘದಂಡ ನಮಸ್ಕಾರಮಾಡಿದ. ಅದಕ್ಕೂ ಇವರ ಮನಸ್ಸು ಒಪ್ಪದಿರಲು, ಆ ರಾಜನು "ನನ್ನ ಐಶ್ವರ್ಯವನ್ನೆಲ್ಲಾ ನಿಮ್ಮ ಪಾದದಲ್ಲಿ ಒಪ್ಪಿಸುತ್ತೇನೆ. ತಮ್ಮ ಭಕ್ತ ಕೋಟಿಯಲ್ಲಿ ಕನಿಷ್ಠನನ್ನಾಗಿಯಾದರೂ ತನ್ನನ್ನು ಭಾವಿಸಿ ರಕ್ಷಿಸ ಬೇಕು" ಎಂದು ಬೇಡಿಕೊಳ್ಳಲು ಆಗ ರಾಜನ ಭಕ್ತಿ ವಿಶೇಷಕ್ಕೆ ಮೆಚ್ಚಿ ಆಲಂಗಿಸಿ ಉಪಚರಿಸಿದರು.

ಗೌಡ ದೇಶದ ಮುಸಲ್ಮಾನ್ ರಾಜನ ಬಳಿ ಮಂತ್ರಿಗಳಾಗಿದ್ದ ಇಬ್ಬರು ಬ್ರಾಹ್ಮಣ ಸಂಸ್ಕೃತ ವಿದ್ವಾಂಸರು ಇವರ ಅಲೌಕಿಕ ಚೈತನ್ಯಕ್ಕೆ ಮರುಳಾಗಿ – ಯಾರೊಬ್ಬರ ಪಾದ ಹಿಡಿಯುವುದು ತಮ ಗೌರವಕ್ಕೆ ಕುಂದೆಂದು ಭಾವಿಸಿದ್ದರೂ – ಚೈತನ್ಯರ ಅಲೌಕಿಕ ಚೈತನ್ಯಕ್ಕೆ ಮರುಳಾಗಿ ಅವರ ಚರಣ ಕಮಲಗಳನ್ನು ಹಿಡಿದು ಮಾರ್ಗ ದರ್ಶಕರಾಗಬೇಕೆಂದು ಪ್ರಾರ್ಥಿಸಿದರು. ಅವರ ಅಭೀಷ್ಟದಂತೆ ಚೈತನ್ಯರು ಅವರಿಗೆ ಸನಾತನ ಮತ್ತು ರೂಪ ಎಂಬ ನಾಮಧೇಯ ಗಳನ್ನಿಟ್ಟು ತಮ್ಮ ಭಕ್ತ ಸಮೂಹದಲ್ಲಿ ಸೇರಿಸಿಕೊಂಡರು.

ಅದ್ವೈತಾಚಾರ್ಯನೆಂಬ ವಿದ್ವಾಂಸನು ಜ್ಞಾನಮಾರ್ಗವೇ ಜನ್ಮ ಸಾರ್ಥಕ್ಯಕ್ಕೆ ಉತ್ತಮ ಸಾಧನವೆಂದು ಬೋಧೆ ಮಾಡು ತ್ತಿದ್ದನು. ಇಂಥವನು ಚೈತನ್ಯರೊಂದಿಗೆ ವಾದನಡೆಸಿ ಅಂತ್ಯದಲ್ಲಿ ಭಕ್ತಿಪಂಥದಲ್ಲೇ ಶ್ರದ್ಧೆಯನ್ನುಂಟು ಮಾಡಿಕೊಂಡನು. ಈತನ ಶಿಷ್ಯ "ಕವಿಕರ್ಣಪೂರ" ಎಂಬುವನು ಚೈತನ್ಯ ಮಾಲಾ ಮಂಜೂಷ ಎಂಬ ಹೆಸರಿನ ಭಾಗವತ ವ್ಯಾಖ್ಯಾನವನ್ನು ಬರೆದನು. ಈ ರೀತಿಯಾಗಿ ಚೈತನ್ಯರ ಜೊತೆಗೆ ಶಿಷ್ಯರೂ ಸೇರಿ ಬಂಗಾಳ, ಬಿಹಾರ, ಒರಿಸ್ಸಾ ಆಸ್ಸಾಂ ಪ್ರಾಂತಗಳಲ್ಲಿ ವೈಷ್ಣವ ಪಂಥವನ್ನು ಅಭಿ ವೃದ್ಧಿಗೊಳಿಸಿದರು.

ಶ್ರೀ ಚೈತನ್ಯರು ಸನ್ಯಾಸ ಸ್ವೀಕಾರ ಮಾಡಿದ ತರುವಾಯ ಇವರ ಶಿಷ್ಯರ ಲ್ಲೊಬ್ಬನಾದ ವಾಸ್ನೀವಾದನೆಂಬುತನು ಇವರ ಪತ್ನಿಯಾದ ವಿಷ್ಣುಪ್ರಿಯಾದೇವಿಯ ಬಳಿಯಲ್ಲಿಯೇ ಇದ್ದು ಸೇವೆಮಾಡುತ್ತ ಆಕೆಯ ಆಜ್ಞೆಯಂತೆ ಚೈತನ್ಯರ ಮೂರ್ತಿ ಯೊಂದನ್ನು ಮಾಡಿಸಿ ಅದಕ್ಕೆ ನಿತ್ಯ ಪೂಜೆ ಆರಾಧನೆ ಸಲ್ಲಿಸುತ್ತಿದ್ದನು.

ಸದಾ ಶ್ರೀಕೃಷ್ಣನ ಸಂಕೀರ್ತನೆಯಲ್ಲೇ ತನ್ಮಯರಾಗಿದ್ದಾಗ ಒಮ್ಮೆ ಕಾಲ್‌ಬೆರಳಿಗೆ ಮೊಳೆತಗುಲಿ ಗಾಯವಾಗಿ ಜ್ವರ ಬಂದುದೇ ಇವರ ಇಹಲೋಕಯಾತ್ರೆಯ ಅಂತ್ಯದ ಸೂಚನೆಯಾಯಿತು. ಇವರು ದಿವ್ಯ ಚಕ್ಷು ಗಳಿಂದಲೇ ಶ್ರೀಕೃಷ್ಣನ ದರ್ಶನಭಾಗ್ಯ ಪಡೆ ದರು. ಶಿಷ್ಯಕೋಟಿಗೆ ಮೊದಲೇ ಇವರು ತಿಳಿಸಿದಹಾಗೆ ಸರ್ವರೂ ಭಗವಂತನನಾಮ ಸಂಕೀರ್ತನೆಯಲ್ಲಿ ಭಾವಪರವಶರಾಗಿದ್ದಾಗ ಶ್ರೀಕೃಷನ ನಾಮಸ್ಮರಣೆ ಮಾಡುತ್ತ ತಮ್ಮ ಭೌತಿಕ ದೇಹವನ್ನು ತ್ಯಜಿಸಿ ಶ್ರೀಕೃಷ್ಣ ನಲ್ಲಿ ಬೆರೆತರು.

'ಕಲಿಯುಗದಲ್ಲಿ ನಾಮ ಸಂಕೀರ್ತನೆ ಯೊಂದೇ ಪರಮ ಸಾಧಕವಾದುದು' ಎಂಬುದನ್ನು ತಮ್ಮ ಅದ್ವಿತೀಯ ಸಾಧು ಜೀವನದಿಂದಲೂ ನವವಿಧ ಭಕ್ತಿಪಾರವಶ್ಯ ತೆಯಿಂದಲೂ ಲೋಕಕ್ಕೆ ಬೋಧಿಸಿದ ಧನ್ಯ ಜೀವಿ ಚೈತನ್ಯರು.

---

(12ನೇ ಪುಟದಿಂದ)

ದೇವತೆಗಳಿಂದ ರಚಿಸಲ್ಪಟ್ಟ ರೀತಿಯಲ್ಲಿ ಕವನ ಮಾಡಿದ್ದಾರೆ.

ಹಿಮ ಕಿರಣಗಳೆಂಬ ದಾರದಿಂದ ಪೋಣಿ ಸಲ್ಪಟ್ಟು, ಸುತ್ತಲೂ ಇರುವ ಕತ್ತಲೆ ಎಂಬ ಕೇಶರಾಶಿಯಿಂದ, ಚೆನ್ನಾಗಿ ಕುಣಿಸುತ್ತ ಅರುಣೋದಯರಾಗದಿಂದ ಸಿಂಧೂರ ಹಚ್ಚಿ ದಂತಾದ ಚಂದ್ರನು ಪ್ರಾತರ್ಲಕ್ಷ್ಮಿಯ ಬೈತ ಲೆಗೆ ಅಲಂಕಾರವಾದ ಮುತ್ತಿನ ಮಣಿಯಂತೆ ವಿರಾಜಿಸುತ್ತಿದ್ದಾನೆ. ಪೂರ್ವ ಸಮುದ್ರ ದಿಂದ ಉದಯಿಸುತ್ತಿರುವ ಸೂರ್ಯನೂ, ಪಶ್ಚಿಮ ಸಮುದ್ರದ ಕಡೆಗೆ ಚಲಿಸುತ್ತಿರುವ ಚಂದ್ರನೂ ಅಂತರಿಕ್ಷದಲ್ಲಿ ನಿಂತಿರುವ ಕಾಲ ವೆಂಬ ನರ್ತಕಸ್ತ್ರೀಯು ಹಗಲು ಹೆಚ್ಚಾಗಿ ದೆಯೋ, ರಾತ್ರಿಯು ಹೆಚ್ಚಾಗಿದೆಯೋ ಎಂದು ತೂಕ ಮಾಡ ನೋಡಿದಂತಿದೆ.

ಹಂಸ ಪಕ್ಷಿಗಳ ಸಮೂಹವು ಶ್ರೀಕೃಷ್ಣ ನಿಗೆ ಉಡಲು ಶುಭ್ರವಾದ ಬಿಳಿಯವಸ್ತ್ರ ವನ್ನು ಅರ್ಪಿಸುವುದಕ್ಕೆ ಬರುವಂತೆ ಓಡಿ ಬರುತ್ತದೆ. ಪ್ರಾತಃಕಾಲದ ಮಂದಮಾರು ತವು ಅರಮನೆಯ ಮುಂಭಾಗದಲ್ಲಿರುವ ಆನೆ ಗಳ ಮದೋದಕ ಸೌರಭವನ್ನೂ, ಕಮಲ ಸರೋವರದ ಪುಷ್ಪಗಳ ಸುವಾಸನೆಯನ್ನೂ ಸ್ವೀಕರಿಸಿ ಅಂತಃಪುರವನ್ನು ಪ್ರವೇಶಿಸಿ ಶ್ರೀಕೃಷ್ಣನ ಶರೀರವನ್ನು ಮೃದುವಾಗಿ ಸ್ಪರ್ಶಿಸುತ್ತಿದೆ. ಅರಮನೆಯ ಉದ್ಯಾನ ವನದಲ್ಲಿರುವ ದುಂಬಿಗಳ ಗಾನವೂ, ಅಲ್ಲಿನ ಲತಾಗೃಹದ ಲತೆಗಳ ಚಲನ ನಾಟ್ಯವೂ ಮತ್ತು ಅಲ್ಲಿರುವ ಆನೆಗಳು ಕಿವಿಯನ್ನಾಡಿ ಸುವ ತಾಳ ಶಬ್ದವೂ ಒಟ್ಟಿಗೆ ಸೇರಿ ಶ್ರೀ ಕೃಷ್ಣನಿಗೆ ಸಂಗೀತ ಸೇವೆ ನಡೆಸುತ್ತಿವೆ. ಅರಮನೆಯ ಸುತ್ತ ಮುತ್ತಲ ತೋಟಗಳಲ್ಲಿ ರುವ ಯುವತಿಯರೆದ್ದು ಶ್ರೀಕೃಷ್ಣನಿಗೆ ಚೂರ್ಣಿಕೆಯನ್ನು ಹಾಡುತ್ತಿದ್ದಾರೆ. ಭೂದೇವಿಯು ನೀಲವಸ್ತ್ರಭೂಷಿತೆಯಾಗಿ ಪತಿಶ್ರೇಷ್ಠನನ್ನು ಎದುರುಗೊಳ್ಳಲು ಬರುತ್ತಿದ್ದಾಳೆ. "ಪನ್ನಗ ಶಯನವನ್ನು ಬಿಟ್ಟು ಎದ್ದೇಳು! ಪ್ರಭೋ! ಸಾರ್ವಭೌಮಾ ಪರಮಮಂಗಳಕರವಾದ ನಿನ್ನ ಕರುಣಾ ಕಟಾಕ್ಷವನ್ನು ಬೀರು" ಎಂಬಂಥ ಅನೇಕ ಅಭಿಪ್ರಾಯಗಳನ್ನೊಳಗೊಂಡ, ಅತಿ ಸುಲಭ ಮತ್ತು ಅತಿರಮ್ಯವಾದ ಶೈಲಿ ಯಲ್ಲಿ, ಉಪಮಾ, ಉತ್ಪ್ರೇಕ್ಷಾ, ಅರ್ಥಾಂತ ರನ್ಯಾಸ, ಸ್ವಭಾವೋಕ್ತಿ, ಸಮಾಸೋಕ್ತಿ ಮುಂತಾದ ಅಲಂಕಾರಗಳಿಂದ ತುಂಬಿತುಳು ಕಾಡುವಂತೆ ಕವಿವರ್ಯರಾದ ವೇದಾಂತ ದೇಶಿಕರು ಯಾದವಾಭ್ಯುದಯದ ಹತ್ತೊಂಬ ತ್ತನೆ ಸರ್ಗದಲ್ಲಿ ವಿವರಿಸಿ ಕವಿ ಸಾರ್ವ ಭೌಮರೆಂಬ ಆಚಂದ್ರಾರ್ಕಕೀರ್ತಿಯನ್ನು ಗಳಿಸಿದ್ದಾರೆ.

ವಾಗ್ದೇವಿಗೆ ನಿತ್ಯಾನಂದಕರವಾದ ಈ ಕಾವ್ಯವನ್ನು ರಚಿಸಿದ ಮಹಾವ್ಯಕ್ತಿಯ ವಿಷಯುಗುಣ ಸಂಪತ್ತು ಜಗತ್ತಿಗೇ ಆದರ್ಶ ಪ್ರಾಯವಾಗಿದೆ. ಕವಿವರ್ಯರು ಕೊನೆಯಲ್ಲಿ ಬಂದು ಸಣ್ಣ ಶ್ಲೋಕದ ಮೂಲಕ ಮಂಗಳಾಚರಣೆ ಮಾಡಿದ್ದಾರೆ.

ಗುರುಭಿರನಘಚಿತ್ತೈ
ರಾಹಿತೋದಾರ ಭೂಮಾ
ಸುರಭಿತರ ಸಮೇತತ್
ಸೂನೃತಂ ವೇಂಕಟೇಶಃ ।
ಭಗವತಿ ಯದುವೀರ
ಪ್ರೀತಿಮಿದ್ಧರ್ಂ ಪ್ರಭೂತಾಂ
ಕವಿ ಕಥಕ ಮೃಗೇಂದ್ರಃ
ಕ್ಷೇಮದಂ ಕಾವ್ಯರತ್ನಮ್ ।

# ಶ್ರೀಕೃಷ್ಣಸ್ತುತಿ

ದೇವದೇವನೆ! ವಸುದೇವನಂದನನೆ!
ಪರಮಹರುಷವ ದೇವಕಿಗೆ ತಂದವನೆ!
ಕಂಸ ಚಾಣೂರ ರಾಕ್ಷಸರ ಕೊಂದವನೆ!
ಕ್ಷಿತಿಗೆಲ್ಲ ಗುರುವೆ! ಶ್ರೀಕೃಷ್ಣ! ವಂದಿಸುವೆ ॥ ೧

ಅಸಿತವಾದಗಸೆಯಾ ಅಲರ ಹೋಲುವನೆ!
ವಜ್ರದಾ ಕಡಗ ತೋಳ್ಬಂದಿಗಳವನೆ!
ದಂಡೆನೇವ್ವರಗಳ ತಳೆದ ಚೆನ್ನಿಗನೆ!
ಕ್ಷಿತಿಗೆಲ್ಲ ಗುರುವೆ! ಶ್ರೀಕೃಷ್ಣ! ವಂದಿಸುವೆ ॥ ೨

ಗುಂಗುರಾಗಿರುವ ಮುಂಗುರುಳನುಳ್ಳವನೆ!
ಪೂರ್ಣಚಂದ್ರನ ಕೋಲ್ವ ಮೋರೆಯುಳ್ಳವನೆ!
ಹೊಳೆಯುವಂತಹ ಕಿವಿಯೋಲೆಯುಳ್ಳವನೆ!
ಕ್ಷಿತಿಗೆಲ್ಲ ಗುರುವೆ! ಶ್ರೀಕೃಷ್ಣ! ವಂದಿಸುವೆ ॥ ೩

ನಗೆಯುಳ್ಳ ಚೆಲುವನೆ! ನಾಲ್ಕುತೋಳಿಹನೆ!
ಶಿರವಲ್ಲಿ ಚೆಲುವಾಗಿ ಶಿಖಿಪಿಂಛವಿಹನೆ!
ಕಲ್ಪವೃಕ್ಷದ ಪುಷ್ಪಗಂಧ ಹೊಂದಿಹನೆ!
ಕ್ಷಿತಿಗೆಲ್ಲ ಗುರುವ! ಶ್ರೀಕೃಷ್ಣ! ವಂದಿಸುವೆ ॥ ೪

ಬಿರಿದ ಪದ್ಮಗಳಂಥ ಬೆಡಗುಕಣ್ಣವನೆ!
ಜಲದಕ್ಕೆ ಸಮವಾದ ಶ್ಯಾಮಸುಂದರನೆ!
ಯದುವಂಶ ಶಿರಕೆ ರತ್ನಾಂಗವಾಗಿಹನೆ!
ಕ್ಷಿತಿಗೆಲ್ಲ ಗುರುವೆ! ಶ್ರೀಕೃಷ್ಣ! ವಂದಿಸುವೆ ॥ ೫

ಧನ್ಯ ಪೀತಾಂಬರಧಾರಿಯಾಗಿಹನೆ!
ತುಳಸಿಯಾ ಪರಿಮಳ ತುಂಬಿದಂಥವನೆ!
ನಲ್ಲೆ ರುಕ್ಮಿಣಿಯೊಂದಿ ನಲಿದಾಡುವನೆ!
ಕ್ಷಿತಿಗೆಲ್ಲ ಗುರುವೆ! ಶ್ರೀಕೃಷ್ಣ! ವಂದಿಸುವೆ ॥ ೬

ಶ್ರೇಷ್ಠ ಧಾನುಷ್ಕನೆ! ಶ್ರೀನಿಕೇತನನೆ!
ಎದೆಯಲ್ಲಿ ಗೋಪಿಕಾಪ್ರೇಯಸೀ ಜನರ!
ಕೋಮಲಸ್ತನಗಳಾ ಕುಂಕುಮವಿಹನೆ!
ಕ್ಷಿತಿಗೆಲ್ಲ ಗುರುವೆ! ಶ್ರೀಕೃಷ್ಣ! ವಂದಿಸುವೆ ॥ ೭

ಶ್ರೀವತ್ಸ ಚಿಹ್ನನೆ! ಹೃದಯಹಬ್ಬಿಹನೆ!
ಶುಭವನಮಾಲೆಯ ಸೂಡಿಕೊಂಡಿಹನೆ!
ಶಂಖ ಚಕ್ರಾಯುಧ ಸಹಿತನಾಗಿಹನೆ!
ಕ್ಷಿತಿಗೆಲ್ಲ ಗುರುವೆ! ಶ್ರೀಕೃಷ್ಣ! ವಂದಿಸುವೆ ॥ ೮

ಶ್ರೀಕರವಾದ ಈ ಕೃಷ್ಣಾಷ್ಟಕವನು
ಭಕ್ತಿಯೊಳ್ ಮುಂಜಾನೆ ಪಠಿಸುವಂಥವರ ।
ಶತಲಕ್ಷ ಜನ್ಮಕ್ಕೆ ಸಂದಂಥ ಎಲ್ಲ
ಪಾಪಂಗಳಾಗಲೆ ಧ್ವಂಸವಾಗುವುವು ॥ ೯

ಕನ್ನಡಾನವತರಣ: ಜಿ. ಚೆನ್ನಯ್ಯ

(೮ ನೇ ಪುಟದಿಂದ)

ಮುಳಿದು ತನಗರ್ಘ್ಯವೆತ್ತಿದ ।
ತಳಿಗೆಯೊಳಿಡೆ ತಿರಿದ ಶಿರದೆ ತಲೆ ಪರಿದಾಗಳ್ ॥
ಕಳಕಳಿಸಿ ನಗುತ್ತಮಿರ್ದುದು ।
ತಳಿಗೆಯು ಮೇಲಸುರನಪಟಿದೇನಚ್ಚರಿಯೋ ॥

– ಹೀಗೆ ಯಮನಿಗರ್ಘ್ಯವೆತ್ತಿದ ಹಾಗಿದ್ದ ಶಿಶುಪಾಲನ ಶಿರೋಂಬುಜವನ್ನು ನೋಡಿ ದುಃಖಿಸಿ ಆತನ ಬಾಂಧವರಾದ ಅಶ್ವಗ್ರೀವ, ವಿದ್ಯುನ್ಮಾಲಿ ನೀಲಾದಿ ರಾಜರುಗಳು ಕೃಷ್ಣನನ್ನು ಬಂದು ತಾಗಿದಾಗ, ಕೃಷ್ಣನು ತನ್ನ ಕಯ್ಯಲ್ಲಿದ್ದ ಚಕ್ರವನ್ನು ಗಿರಗಿರನೆ ತಿರುಗಿಸಿ ಅವರಮೇಲೆ ಇಡಲಾಗಿ ಆ ತಲೆಗಳು ಮೇಲಕ್ಕೆ ನೆಗೆದು ಮೇಘದ ಮಧ್ಯದಿಂದ ನೆಲಕ್ಕೆ ಬಿದ್ದವು.

ಪಂಪನ ಮೇಲಿನ ಪದ್ಯಭಾಗವು ಶಿಶುಪಾಲನ ವಧೆಯ ಸನ್ನಿವೇಶವನ್ನು ಸಂಗ್ರಹವಾಗಿ, ರಸವತ್ತಾಗಿ ಶಕ್ತಿಯುಕ್ತವಾಗಿ ಕಣ್ಣಿಗೆ ಕಟ್ಟಿದಂತೆ ಚಿತ್ರಿಸುತ್ತದೆ! ಇಲ್ಲಿ ಪಂಪನಿಗೆ ಬೇಕಾದುದು ಮುಖ್ಯವಾಗಿ ಕಾವ್ಯಸಹಜವಾದ ಕಥಾಸರಣಿ ಮಾತ್ರ. ಅವನಿಗೆ ಕೃಷ್ಣನ ಸ್ತೋತ್ರದಲ್ಲಿ ಅಷ್ಟು ಆಸಕ್ತಿಯಿಲ್ಲ. ಅವನ ಧ್ಯೇಯವೆಲ್ಲ ಅವನ ಆಶ್ರಯದಾತನಾದ ಅರಿಕೇಸರಿಯ ಸ್ಥಾನಾಪನ್ನನಾದ ಧನಂಜಯನ ಶೌರ್ಯಪ್ರತಿಪಾದನೆಯೇ. ಈ ಭಾಗವು ಆ ವಿಷಯಕವಾಗಿ ಪೋಷಕವಲ್ಲದಿದ್ದರೂ ಅವನ ಸಹಜ ಕವಿತಾಶಕ್ತಿಗನುಗುಣವಾಗಿ ಬಹು ಆಕರ್ಷಕವಾಗಿ ನಿರೂಪಿಸಿನ್ದಾನೆ.

ಮುಂದೆ ಕನ್ನಡದಲ್ಲಿ ಭಾರತವನ್ನು ರಚಿಸಿದ ಗದುಗಿನ ನಾರಣಪ್ಪನಿಗೆ ಮೂಲ ಭಾರತದಂತೆ ಕೃಷ್ಣನ ಮಹಿಮಾವರ್ಣನೆಯೇ ಪ್ರಧಾನ ಧ್ಯೇಯವಾಗಿರುವುದರಿಂದ ಅವನು ಈ ಭಾಗದ ರಚನೆಯಲ್ಲಿ ಮೂಲವನ್ನೇ ಅನುಸರಿಸಿ ಮೂರು ಸಂಧಿಯ ಸುಮಾರು ೨೦೦ ಪದ್ಯಗಳಲ್ಲಿ ವಿಸ್ತರಿಸಿರುವುದರಿಂದ ಅಲ್ಲಿ ಇಲ್ಲಿಯ ಸಂಕ್ಷಿಪ್ತತೆಯನ್ನು ಕಾಣಲು ಸಾಧ್ಯವಿಲ್ಲ. ಆದುದರಿಂದ ಈ ಭಾಗವು ಕನ್ನಡಸಾಹಿತ್ಯದಲ್ಲಿಯೇ ಅಪೂರ್ವ ಸ್ಥಾನವನ್ನು ಪಡೆದಿದೆ. ★

**ಸಪ್ತಗಿರಿಯ ಬಗ್ಗೆ**
**ನಿಮ್ಮ ಅಭಿಪ್ರಾಯಗಳಿಗೆ ಸ್ವಾಗತ**

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಸಿ : ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ, ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.



# ಗೃಹಲಕ್ಷ್ಮಿ





ನಿತ್ಯ ನೂತನವಾದ ಸುಖವನ್ನು ಪಡೆಯಲು ದೇವದಾನವರಿಬ್ಬರೂ ಕೂಡಿಕೊಂಡು ಸಮುದ್ರ ಮಥನವನ್ನಾರಂಭಿಸಿದರು, ಈ ಮಥನ ಕಾಲದಲ್ಲಿಯೇ ಮೊಟ್ಟಮೊದಲು ಲಕ್ಷ್ಮಿಯು ಅವರಿಗೆ ಕಾಣಿಸಿಕೊಂಡಳು, ಆಕೆಯ ರೂಪಲಾವಣ್ಯಗಳಿಗೆ ಮಾರುಹೋದವರು ಬಹಳ. ಆದರೆ ಅವಳು ಕೈ ಹಿಡಿದುದು ನಾರಾಯಣನನ್ನೇ. ಅಪಾರವಾದ ಜಲರಾಶಿಯು ಅವಳ ತವರು ಮನೆಯಾದರೆ ವೈಕುಂಠವು ಅವಳ ಅತ್ತೆಯಮನೆ ಎಂದು ಕರೆಸಿಕೊಂಡಿತು.

ಹೀಗಿದ್ದರೂ ಸಹ ಲಕ್ಷ್ಮಿ ಬಹು ಚಂಚಲಳೆಂದೇ ಪ್ರಸಿದ್ಧಿ, ಅವಳ ಕಟಾಕ್ಷಕ್ಕೆ ಒಳಗಾದ ಬಡವನೂ ಧನಿಕನಾಗಬಲ್ಲ. ಒಂದು ವೇಳೆ ಅವಳು ಮುನಿದರೆ ಧನಿಕನೂ ದರಿದ್ರನಾಗಿ ಬಳಲಬೇಕಾಗುವುದು – ಆದುದರಿಂದಲೇ ಯಾವಾಗಲೂ ಅವಳ ಅನುಗ್ರಹವು ತಮ್ಮ ಮೇಲಿರುವಂತೆ ವರ್ತಿಸುವುದರಲ್ಲಿ ಹಿಂದೂಗಳು ಪ್ರಯತ್ನಿಸುವುದುಂಟು.

## ಮಾತೃಪೂಜೆ

ಮಾತೃತ್ವದ ಪೂಜೆಯು ಶಾಕ್ತಪಂಥದವರಿಗೆ ಬಹುಮುಖ್ಯವಾದುದು. ಈ ಶಾಕ್ತಪಂಥೀಯರಲ್ಲಿ ದಕ್ಷಿಣಾಚಾರ, ವಾಮಾಚಾರ ಎಂಬ ಎರಡು ವಿಧದ ಸಂಪ್ರದಾಯಗಳಿದ್ದು ಅದರಲ್ಲಿ ದಕ್ಷಿಣಾಚಾರವು ವೇದೋಕ್ತವಾದ ಸಾತ್ವಿಕ ಸಂಪ್ರದಾಯವೆಂದೆನಿಸುತ್ತವೆ. ಋಗ್ವೇದ, ಅರಣ್ಯಕ ಬ್ರಾಹ್ಮಣ ಮೊದಲಾದ ಭಾಗಗಳಲ್ಲಿ ಈ ಶಕ್ತಿಮಾತೆಯನ್ನು 'ಜಗನ್ಮಾತೆ' ಎಂದು ಸಂಬೋಧಿಸಿರುವುದುಂಟು. ಅಲ್ಲದೆ ಈ ಮಾತೆಯನ್ನು ದುರ್ಗೆ, ನೈರೋಜನ್ನಿ, ವೇದಮಾತೆ, ಕಾತ್ಯಾಯನಿ ಎಂಬೆಲ್ಲ ಹೆಸರಿನಿಂದ ಅವಳ ಶಕ್ತಿಯನ್ನು ಕುರಿತು ಸ್ತೋತ್ರ ಮಾಡಿದ ಭಾಗಗಳೂ ಉಂಟು.

ಶ್ರೀ ಅಥವಾ ಲಕ್ಷ್ಮಿಯ ಪೂಜಾವಿಧಾನವು ಭಾರತದ ಎಲ್ಲ ಪ್ರಾಂತಗಳಲ್ಲಿಯೂ ಆಚರಣೆಯಲ್ಲಿದೆ. ವಿಶೇಷವಾಗಿ ದಕ್ಷಿಣ ಭಾರತದಲ್ಲಿ ಶ್ರಾವಣ ಮಾಸದಲ್ಲಿ ಈ ದೇವಿಯನ್ನು ಪೂಜಿಸುವ ಸಂಪ್ರದಾಯವಿದೆ. ಕನ್ನಡ ನಾಡಿನ ಗಡಿಭಾಗದಲ್ಲಿರುವ ಪಂಚಗಂಗಾ ನದಿಯ ದಂಡೆಯ ಮೇಲಿರುವ ಕೊಲ್ಲಾಪುರದ ಲಕ್ಷ್ಮಿಯನ್ನು ಪೂಜಿಸುವ ಕುಟುಂಬಗಳು ಕರ್ನಾಟಕ ಪ್ರಾಂತ್ಯದಲ್ಲಿ ವಿಶೇಷವಾಗಿರುವುದನ್ನು ನಾವು ಕಾಣಬಹುದು.

## ಪೌರಾಣಿಕ ಹಿನ್ನೆಲೆ

ಬ್ರಹ್ಮದೇವನ ಮಾನಸಪುತ್ರರಾದ ಗಯ, ಲವಣ, ಕೊಲ್ಲ ಎಂಬ ಮೂರು ಜನರು ಪರ

# ಶ್ರಾವಣಲಕ್ಷ್ಮಿ

ಶಿವನನ್ನು ಕುರಿತು ತಪಸ್ಸು ಮಾಡಿ ವರವನ್ನು ಸಂಪಾದಿಸಿಕೊಂಡು ಮಹಾಲೋಕಕಂಟಕರಾಗಿ ವರ್ತಿಸಲಾರಂಭಿಸಿದರು. ಆಗ ನಾರಾಯಣನು ಗಯ ಹಾಗೂ ಲವಣರನ್ನು ಸಂಹಾರಮಾಡಿದನು. ತನ್ನ ಸೋದರರ ಮರಣವಾರ್ತೆಯನ್ನು ತಿಳಿದ ಕೊಲ್ಲನು ಸಹ್ಯಾದ್ರಿ ಪರ್ವತದ ಕೊಲ್ಲಗಿರಿಗೆ ಬಂದು ಬ್ರಹ್ಮದೇವನನ್ನು ಕುರಿತು ತಪವನ್ನಾಚರಿಸ ತೊಡಗಿದನು. ಅತನ ತಪಕ್ಕೆ ಮೆಚ್ಚಿದ ಬ್ರಹ್ಮನು ಕೊಲ್ಲನಿಗೆ ಲೋಕಾಧಿಪತ್ಯವನ್ನು ಅನುಗ್ರಹವನ್ನು ಮಾಡಿದನು. ಕಾಲಾಂತರದಲ್ಲಿ ಕೊಲ್ಲನು ತನ್ನ ಮಗನಾದ ಕರವೀರನಿಗೆ ಸಾಮ್ರಾಜ್ಯ ಪಟ್ಟವನ್ನು ಕಟ್ಟಿ ತಪಸ್ಸಿಗಾಗಿ ಪುನಃ ಕಾಡಿಗೆ ಹೊರಟು ಹೋದನು. ಕರವೀರನ ರಾಜ್ಯಾಡಳಿತದಲ್ಲಿ ದೇವತೆಗಳಿಗೆ ತುಂಬ ಹಿಂಸೆಯಾಗಲಾರಂಭಿಸಿತು. ಆಗ ಶಿವನು ಅವನನ್ನು ಸಂಹಾರಮಾಡಿದನು. ಮರಣೋನ್ಮುಖನಾದ ಕರವೀರನ ಪ್ರಾರ್ಥನೆಯಂತೆ ಮುಂದೆ ಆ ಪ್ರದೇಶವನ್ನೆಲ್ಲ ಕರವೀರ ಪ್ರಾಂತವೆಂದು ಕರೆಯಲಾರಂಭಿಸಿದರು.

ಮಗನ ದುರಂತ ವಾರ್ತೆಯನ್ನು ತಿಳಿದ ಕೊಲ್ಲನು ಪುನಃ ಕಾಡಿನಿಂದ ಮರಳಿ ಬಂದ. ಮಹಾಲಕ್ಷ್ಮಿಯು ಉಪಸ್ಥಿತಳಾಗಿರುವಾಗ ದೇವತೆಗಳ ಮೇಲೆ ಸೇಡು ತೀರಿಸಿಕೊಳ್ಳುವುದು ಸಾಧ್ಯವಿಲ್ಲವೆಂದೇ ಕೊಲ್ಲನು ಒಂದು ತಂತ್ರವನ್ನು ಹೂಡಿದ್ದನು. ಕೊಲ್ಲನಿಗಿತ್ತ ವಚನದಂತೆ ಲಕ್ಷ್ಮಿಯು ಹಿಮಾಚಲಕ್ಕೆ ಹೊರಟು ಹೋದಳು. ಅವಳಿಲ್ಲದಂತಾದಾಗ ಕೊಲ್ಲನಿಂದ ದೇವತೆಗಳಿಗೆ ಕಿರುಕುಳ ಆರಂಭವಾಯಿತು. ಕೊನೆಗೊಮ್ಮೆ ನೂರು ವರುಷಗಳ ಗಡುವು ಮುಗಿಯಿತು. ಆಗ ಲಕ್ಷ್ಮಿಯು ಘೋರರೂಪವನ್ನು ಧಾರಣಮಾಡಿಕೊಂಡು ಕಂಕಭೈರವ, ಸಿದ್ಧಬಟುಕೇಶ್ವರ, ತಾಳಬೇತಾಳ, ಹಾಗೂ ಸೋದರಿಯಾದ ಚಾಮುಂಡಿ ಮೊದಲಾದವರನ್ನು ಕೂಡಿಕೊಂಡು ಬಂದು ಕೊಲ್ಲನನ್ನು ಸಂಹಾರಮಾಡಿ ಲೋಕದಲ್ಲಿ ಶಾಂತಿಯು ನೆಲಸು

**ಶ್ರೀ ಉದ್ಯ ರಾಮಾಚಾರ್ಯ**

ವಂತೆ ಮಾಡಿದಳು. ಇದು ಕರವೀರದ ಕ್ಷೇತ್ರ ಮಹಾತ್ಮೆಯ ಪೌರಾಣಿಕ ಹಿನ್ನಲೆಯ ಕಥೆ.

## ಶ್ರೀ ಚಕ್ರ

ಕರವೀರಪುರ ಪುಣ್ಯ ಕ್ಷೇತ್ರವಾದರೂ ಸಹ ಒಂದು ಕಾಲದಲ್ಲಿ ಶಾಕ್ತರ ಕೇಂದ್ರ ಸ್ಥಾನವಾಗಿರಬಹುದೆಂದು ನಂಬಲು ದೇವಾಲಯದ ಒಂದು ಭಾಗದಲ್ಲಿ ಇಂದಿಗೂ ಶ್ರೀಚಕ್ರವಿದೆ. ಇನ್ನೂ ಲಕ್ಷ್ಮಿಯ ಮೂರ್ತಿ ಶಿಲ್ಪವೂ ಸಹ ಈ ಮಾತಿಗೆ ಹೆಚ್ಚು ಪುಷ್ಟಿಯನ್ನೀಯುತ್ತದೆ. ಆರು ಅಡಿ ಎತ್ತರದ ಈ ಮೂರ್ತಿಯ ಹಿಂಭಾಗದಲ್ಲಿ ಸಿಂಹವನ್ನು ಬಿಡಿಸಿದ್ದಾರೆ. ಅವಳ ಒಂದು ಕೈಯಲ್ಲಿ ಕೌಮೋದಕೀ ಎಂಬ ಗದೆ ಇವೆ. ಮತ್ತೊಂದು ಕೈಯಲ್ಲಿ ಖೇಟಕವೆಂಬ ಗುರಾಣಿಯನ್ನು ಹಿಡಿದಿದ್ದಾರೆ ಬೇರೊಂದು ಕೈಯಲ್ಲಿ ಪಾನ ಪಾತ್ರೆಯನ್ನು ಕಾಣಬಹುದಾಗಿವೆ. ಈ ವಿಚಾರದಲ್ಲಿ ಮಾರ್ಕಂಡೇಯ ಪುರಾಣದಲ್ಲಿ

"ಮಾತುಲಿಂಗಂ ಗದಾಖೇಟಂ
ಪಾನ ಪಾತ್ರಂ ಚ
ನಾಗ ಲಿಂಗಂ ಚ ಯೋನಿಂ ಚ
ಬಿಭ್ರತೀನ್ನೃಪಮೂರ್ಧನಿ ||

ಎಂದು ಹೇಳಲಾಗಿದೆ. ತಲೆಯ ಮೇಲೆ ನಾಗ ಲಿಂಗ ಹಾಗೂ ಯೋನಿಯನ್ನು ಬಿಡಿಸಲಾಗಿವೆ. ಇದು ಬಹು ಮಹತ್ವದ ಮಾತು. ಇನ್ನು ಶ್ರೀ ವೆಂಕಟೇಶ ಮಹಾತ್ಮೆ ಎಂಬ ಗ್ರಂಥದಲ್ಲಿ ಲಕ್ಷ್ಮಿಯು ವೈಕುಂಠವನ್ನು ತೊರೆದು ಕರವೀರಪುರವನ್ನು ತನ್ನ ವಾಸ ಸ್ಥಳವನ್ನಾಗಿ ಆರಿಸಿಕೊಂಡಳೆಂದೂ, ಆಗ ನಾರಾಯಣನು ತಿರುಮಲೆಯ ಗಿರಿಯನ್ನು ಆಶ್ರಯಿಸಿದನೆಂದೂ ಮುಂದೆ ಅವನೇ ಶ್ರೀನಿವಾಸನಾಗಿ ವಿವಾಹಕ್ಕೆ ಸಿದ್ಧನಾದಾಗ ಪತಿ ಪತ್ನಿಯರ ಸಮಾಗಮವು ತಿರುಮಲೆಯಲ್ಲಾಯಿತೆಂದೂ ವರ್ಣಿಸಲಾಗಿದೆ. ಈ ತಿರುಮಲೆಯೂ ಸಹ ಒಂದು ಕಾಲದಲ್ಲಿ ಶಾಕ್ತರ ಪೀಠವಾಗಿತ್ತೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿರುವದು ಗಮನಿಸಬೇಕಾದ ವಿಷಯ.

ನಾಡಿನ ಗಡಿಭಾಗದ ಕ್ಷೇತ್ರವಾದ ಕರವೀರಪುರಕ್ಷೇತ್ರದ ಸ್ಫೂರ್ತಿಯನ್ನು ಪಡೆದು ಕನ್ನಡ ನಾಡಿನಲ್ಲಿ ದೊಡ್ಡಗದ್ದವಳ್ಳಿ ಕಲ್ಲೂರು ಎಂಬಲ್ಲಿ ಲಕ್ಷ್ಮಿಯ ದೇವಾಲಯಗಳು ರೂಪಿತವಾದವು. ದೊಡ್ಡಗದ್ದವಳ್ಳಿಯ ಲಕ್ಷ್ಮಿಯು ಶಂಖ, ಚಕ್ರ, ಗದಾ ಹಾಗೂ ಜಪಮಾಲೆಗಳನ್ನು ಧಾರಣಮಾಡಿದ್ದರೆ ರಾಯಚೂರಿನ ಸಮೀಪದಲ್ಲಿರುವ ಕಲ್ಲೂರಿನ ಲಕ್ಷ್ಮಿಯು ಸಿಂಹವಾಹಿನಿಯಾಗಿರುವುದನ್ನು ಕಾಣಬಹುದು.

## ಶ್ರೀ ಸೂಕ್ತ

ಶ್ರೀ ಲಕ್ಷ್ಮಿಯನ್ನು ಕುರಿತು ರಚಿತವಾದ ಸ್ತೋತ್ರಭಾಗಗಳಲ್ಲಿ ಶ್ರೀಸೂಕ್ತ ಎಂಬ ಸ್ತೋತ್ರಕ್ಕೆ ವಿಶೇಷವಾದ ಸ್ಥಾನವಿದೆ. ಅವಳ ಚಿನ್ನದ ಗುಣವುಳ್ಳವಳೆಂದೂ, ಹೆಣ್ಣು ಜಿಂಕೆಯಂತೆ ಆಕರ್ಷಣಶಕ್ತಿಯುಳ್ಳವಳೆಂದೂ, ಆಶ್ರಿತರ ಪಾಪಗಳನ್ನು ಪರಿಹಾರ ಮಾಡುವವಳೆಂದೂ, ಚಂದ್ರನಂತೆ ಎಲ್ಲರಿಗೂ ಆಹ್ಲಾದವನ್ನೀಯುವವಳೆಂದೂ, ವರ್ಣನೆಯನ್ನು ಮಾಡಿ ಅವಳ ಅನುಗ್ರಹದಿಂದ ಹಿರಣ್ಯ, ದನ, ಕರು, ಕುದುರೆ, ದಾಸದಾಸಿಯರು–ಮೊದಲಾದ ಸಂಪತ್ತನ್ನು ಹೊಂದುವೆವು ಎಂದು ಹೇಳಲಾಗಿದೆ. ಮುಂದೆ "ಆನಂದ ಸ್ವರೂಪಳೂ, ಮುಗುಳನಗೆಯುಳ್ಳವಳೂ ದಿವ್ಯವಾದ ಬಂಗಾರ ಮಂಟಪದಲ್ಲಿ ವಿರಾಜಮಾನಳಾದವಳೂ, ದಯಾರ್ದ್ರ ಹೃದಯದವಳೂ, ಪದ್ಮವರ್ಣದಿಂದ ಕೂಡಿದವಳೂ ಆದ ಶ್ರೀದೇವಿಯೇ ನಿನ್ನ ಅನುಗ್ರಹವನ್ನು ಪಡೆಯಲೋಸುಗ ಹಂಬಲಿಸುತ್ತಲಿದ್ದೇನೆ; ತಾಯೀ, ನಮ್ಮ ಮನೋಧರ್ಮಗಳನ್ನೂ ಹಾಗೂ ಮಾತಿನ ಸತ್ಯತೆಯನ್ನೂ ಕಾಪಾಡಿಕೊಂಡು ಬರುವಂತೆ ನಮ್ಮನ್ನು ಅನುಗ್ರಹಿಸಿ"ಎಂದು ಅನನ್ಯವಾಗಿ ಆ ದೇವಿಯನ್ನು ಬೇಡಿಕೊಂಡ ಪ್ರಾರ್ಥನಾಭಾಗಗಳು ಆ ಸೂಕ್ತದಲ್ಲಿದೆ. ಶ್ರಾವಣದ ಆಗಮನದೊಡನೆ ಪ್ರತಿ ಮನೆಯೂ ಸುಣ್ಣಬಣ್ಣಗಳಿಂದ, ತಳಿರು ತೋರಣಗಳಿಂದ ಅಲಂಕಾರಗೊಂಡು ಪ್ರತಿ ಶುಕ್ರವಾರಕ್ಕೊಮ್ಮೆ ಕುಟುಂಬದವರೆಲ್ಲ ಒಗ್ಗೂಡಿಕೊಂಡು ನವರಸ ಪಕ್ವಾನಗಳನ್ನೂ ಮಾಡಿ ಧೂಪ ದೀಪ ನೈವೇದ್ಯಾದಿಗಳಿಂದ ಶ್ರೀದೇವಿಯನ್ನು ಪೂಜಿಸುವಂಥ ಸಂಪ್ರದಾಯವಿದೆ. ಯಾರ ಮನೆಗಳಲ್ಲಿ ವರಮಹಾಲಕ್ಷ್ಮೀದೇವಿಯ ಪೂಜೆ ಇದೆಯೋ ಅವರು ಎರಡನೆಯ ಶುಕ್ರವಾರ ಈ ದೇವಿಯನ್ನು ಸಂಕಲ್ಪಾನುಸಾರವಾಗಿ ವೇದೋಕ್ತ ಪೂಜೆ ಮಾಡುವ ಪದ್ಧತಿ ಇದೆ.

ಶ್ರಾವಣಮಾಸ ಹಾಗೂ ಶುಕ್ರವಾರದ ಶ್ರೀಲಕ್ಷ್ಮೀ ಪೂಜೆ ಇವುಗಳನ್ನು ಕುರಿತು ಕನ್ನಡದ ಹರಿದಾಸರು ಹಾಗೂ ಕವಿಗಳೂ ನಾನಾ ರೀತಿಯಲ್ಲಿ ಹಾಡಿ ನಿಸರ್ಗಜನ್ಯವಾದ ದೇವಿಯನ್ನು ಕೊಂಡಾಡಿರುವುದನ್ನು ನಾವು ಕಾಣಬಹುದು.

★

# ವಾರ್ತಾಲಹರಿ

## ರಾಜಂಪೇಟೆಯಲ್ಲಿ ತಿ. ತಿ. ದೇ. ಸ್ವರ್ಣೋತ್ಸವ

ರಾಜಂಪೇಟೆಯಲ್ಲಿ ಜುಲೈ 11, 12 ರಂದು ತಿ. ತಿ. ದೇ. ಸ್ವರ್ಣೋತ್ಸವಗಳು ಯಶಸ್ವಿಯಾಗಿ ಎ. ಬಿ. ನಾರಾಯಣ ರೆಡ್ಡಿ ಕಾಲೋನಿಯ ಮೈದಾನದಲ್ಲಿ ನಡೆದವು.

ಜುಲೈ 11 ರಂದು ಶ್ರೀ ಬಿ. ಸುಬ್ರಹ್ಮಣ್ಯ ಶೆಟ್ಟಿ ಅವರ ಅಧ್ಯಕ್ಷತೆಯಲ್ಲಿ ಆರಂಭವಾದ ಸ್ವರ್ಣೋತ್ಸವಗಳಲ್ಲಿ ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಕಾರ್ಯದರ್ಶಿ ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಶ್ರೀ ಮಲ್ಲಾದಿ ಚಂದ್ರಶೇಖರ ಶಾಸ್ತ್ರಿ, ಮಾತಾ ನಿರಂಜನಾನಂದಗಿರಿ ಮಾತಾಜಿ, ಮೊದಲಾಗಿ ಅನೇಕ ಆಚಾರ್ಯರು ಉಪನ್ಯಾಸಗಳನ್ನು ನೀಡಿದರು.

ಜುಲೈ 15 ರಂದು ಕಡಪ ಜಿಲ್ಲೆಯ ಜಿಲ್ಲಾಧಿಕಾರಿ ಶ್ರೀ ಅಮಿತಾಭ್ ಭಟ್ಟಾಚಾರ್ಯ ಅವರ ಅಧ್ಯಕ್ಷತೆಯಲ್ಲಿ ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿರೆಡ್ಡಿಯವರು ಸಾಹಿತ್ಯ ಧಾರ್ಮಿಕ ಸಭೆಯನ್ನು ಆರಂಭಿಸಿದರು. ಶ್ರೀ ಮಲ್ಲಾದಿ ಚಂದ್ರಶೇಖರಶಾಸ್ತ್ರಿಯವರ ಪುರಾಣ ವಾಚನ, ಮಾತಾ ನಿರಂಜನಾ ನಂದಗಿರಿ ಮಾತಾಜಿ ಅವರ ಧಾರ್ಮಿಕ ಉಪದೇಶಗಳು ನಡೆದವು. ತಿ. ತಿ. ದೇ. ಅನ್ನಮಾಚಾರ್ಯ ಪ್ರಾಜೆಕ್ಟ್ ಕಲಾವಿದರಿಂದ ಸಂಗೀತ ಸಭೆ ನಡೆದ ನಂತರ ಶ್ರೀ ಮಂಗಲ ಪಟ್ಟಾಭಿ ಭಾಗವತರ್ ಅವರ ಶ್ರೀನಿವಾಸ ಕಲ್ಯಾಣ ಹರಿಕಥೆ ನಡೆಯಿತು.

ಶ್ರೀ ಎಂ. ವಿ. ಎಸ್. ಶಾಸ್ತ್ರಿಯವರು ವಂದನಾರ್ಪಣೆ ಮಾಡಿದರು.



ರಾಜಂಪೇಟೆಯಲ್ಲಿ ನಡೆದ ತಿ. ತಿ. ದೇ. ಸ್ವರ್ಣೋತ್ಸವದ ಒಂದು ದೃಶ್ಯ. ಕುಳಿತಿರುವವರು ಸರ್ವಶ್ರೀ ಮಲ್ಲಾದಿ ಚಂದ್ರಶೇಖರಶಾಸ್ತ್ರಿ, ಕಡಪಜಿಲ್ಲಾಧಿಕಾರಿ ಅಮಿತಾಬ್ ಭಟ್ಟಾಚಾರ್ಯ, ಜಿ. ಕುಮಾರಸ್ವಾಮಿರೆಡ್ಡಿ, ಸಮುದ್ರಾಲ ಲಕ್ಷ್ಮಣಯ್ಯ, ಮಾತಾ ನಿರಂಜನಾನಂದಗಿರಿ ಮಾತಾ.

---

ಮಾರುತಿ ಉದ್ಯೋಗ ಸಂಸ್ಥೆಯು ತಯಾರಿಸಿದ ಮೊದಲನೆಯ ಮಾರುತಿ ಕಾರನ್ನು ಸಂಸ್ಥೆಯ ಪರವಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಅರ್ಪಿಸಲಾಯಿತು. ಉದ್ಯೋಗ ಸಂಸ್ಥೆಯ ಪರವಾಗಿ ಅದರ ಅಧ್ಯಕ್ಷ ಶ್ರೀ ವಿ. ಕೃಷ್ಣಮೂರ್ತಿ ಅವರು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿ ರೆಡ್ಡಿಯವರಿಗೆ ಇದನ್ನು ಒಪ್ಪಿಸಿದರು.




## ವೇದ ಶಾಸ್ತ್ರಾಗಮ ವಿದ್ವತ್ ಸದಸ್

ಶ್ರೀನಿವಾಸ ಮಂಗಾಪುರದ ಎಸ್. ವಿ. ವೇದ ಪಾಠಶಾಲೆಯಲ್ಲಿ ಜುಲೈ ತಿಂಗಳಿನ 20 ರಂದು ವೇದ ಶಾಸ್ತ್ರ ಆಗಮ ವಿದ್ವತ್ ಸದಸ್ ಕಾರ್ಯಕ್ರಮವು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿರೆಡ್ಡಿ ಅವರ ಅಧ್ಯಕ್ಷತೆಯಲ್ಲಿ ನಡೆಯಿತು.

ವೇದಗಳ ಶಿಕ್ಷಣಕ್ಕಾಗಿ ಹೆಚ್ಚಿನ ಪಾಠಶಾಲೆಗಳನ್ನು ತೆರೆಯ ಬೇಕಾಗಿರುವುದರ ಅಗತ್ಯವನ್ನು



ವಿಕಲಾಂಗ ಶಿಕ್ಷಣ ತರಬೇತಿ ಕೇಂದ್ರ ತಿ.ತಿ.ದೇ. ಗಳ ನೇತೃತ್ವದಲ್ಲಿ ಆರಂಭವಾಗಿ ಒಂದು ವರ್ಷವಾಯಿತು. ವಾರ್ಷಿಕೋತ್ಸವದ ಸಾಂಕೇತಿಕ ಸಭೆಯಲ್ಲಿ ಮಾತನಾಡುತ್ತ ಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿ ರೆಡ್ಡಿ. ಕುಳಿತಿರುವರು ಡಾ॥ ವೈ. ಆರ್. ಧನಲಕ್ಷ್ಮಿ, ಶ್ರೀಮತಿ ನಿರ್ಮಲಾ ಕುಮಾರಸ್ವಾಮಿ ರೆಡ್ಡಿ, ಶ್ರೀ ರಾವುಲ ಸೂರ್ಯನಾರಾಯಣ ಮೂರ್ತಿ ಅವರುಗಳು.

## ಪ್ರಥಮ ವಾರ್ಷಿಕೋತ್ಸವ

ವಿಕಲಾಂಗ ತರಬೇತಿ ಶಿಕ್ಷಣ ಸಂಸ್ಥೆಯ ಪ್ರಥಮ ವಾರ್ಷಿಕೋತ್ಸವ ಸಂದರ್ಭದಲ್ಲಿ ನಡೆದ ವಸ್ತು ಪ್ರದರ್ಶನವನ್ನು ಉದ್ಘಾಟಿಸುವಲ್ಲಿ ಶ್ರೀಮತಿ ನಿರ್ಮಲಾ ಕುಮಾರಸ್ವಾಮಿರೆಡ್ಡಿ ಹಾಗೂ ಡಾ॥ ವೈ. ಆರ್. ಧನಲಕ್ಷ್ಮಿ.



ಕುರಿತು ಅವಧಾರಿಸುತ್ತ ಮಾತನಾಡಿದ ಕಾರ್ಯನಿರ್ವಹಣಾಧಿಕಾರಿಗಳು ತಿ. ತಿ. ದೇವಸ್ಥಾನಗಳು ವೇದ ಶಾಸ್ತ್ರ ಆಗಮಗಳ ಪ್ರಚಾರಕ್ಕಾಗಿ ಹೊಂದಿರುವ ಹಲವಾರು ಯೋಜನೆಗಳ ಲಾಭವನ್ನು ವಿದ್ವಾಂಸರು ಪಡೆಯಬೇಕೆಂದು ಕರೆ ನೀಡಿದರು. ವೇದಗಳ ಕ್ಯಾಸೆಟ್‌ಗಳು ಸಾರ್ವಜನಿಕರಿಗೆ ದೊರೆಯುವಂತೆ ಮಾಡಲು ಪ್ರಯತ್ನಗಳು ನಡೆದಿವೆ ಎಂದೂ ಅವರು ತಿಳಿಸಿದರು.

ಎಸ್. ವಿ. ವೇದಪಾಠಶಾಲೆಯ ಪ್ರಾಂಶುಪಾಲ ಶ್ರೀ ಡಿ. ರಾಮಚಂದ್ರ ಶಾಸ್ತ್ರಿ ಅವರು ಶಾಲೆಯ ವರದಿಯನ್ನು ಓದಿದರು. ಪೌರಸಂಬಂಧಾಧಿಕಾರಿ ಶ್ರೀ ರಾವುಲ ಸೂರ್ಯನಾರಾಯಣ ಮೂರ್ತಿ ಅವರು ವೇದಗಳ ರಕ್ಷಣೆ ಹಾಗೂ ಪ್ರಚಾರದಲ್ಲಿ ತಿ. ತಿ. ದೇ. ಹೊಂದಿರುವ ಹಲವಾರು ಯೋಜನೆಗಳ ಬಗ್ಗೆ ವಿವರಗಳನ್ನು ನೀಡಿದರು. ತಿ. ತಿ. ದೇ ವಿದ್ಯಾಧಿಕಾರಿ ಶ್ರೀ ಪಿ. ಚಂದ್ರಶೇಖರ ನಾಯುಡು ಅವರು ವೈದಿಕ ವಿದ್ವಾಂಸರನ್ನು ಶಾಲು ಹೊದಿಸಿ ಸನ್ಮಾನಿಸಿದರು.

## ಅಂಗವಿಕಲರಿಗಾಗಿ ರಾಜ್ಯ ಸರ್ಕಾರದ ಹೆಚ್ಚಿನ ನೆರವು

ಅಂಗವಿಕಲರ ಅಗತ್ಯಗಳ ಹಾಗೂ ಸಾಮಾಜಿಕ ಅಭಿವೃದ್ಧಿಯತ್ತ ಆಂಧ್ರ ಪ್ರದೇಶದ ರಾಜ್ಯ ಸರ್ಕಾರವು ಹೆಚ್ಚಿನ ಶಾಲೆ, ತರಬೇತಿ ಕೇಂದ್ರಗಳನ್ನು ತೆರೆಯುವ ಪ್ರಯತ್ನಗಳನ್ನು ನಡೆಸಿದೆ.

ಆಂಧ್ರಪ್ರದೇಶದ ಸರ್ಕಾರದ ಮುಖ್ಯ ಕಾರ್ಯದರ್ಶಿ ಶ್ರೀ ಶ್ರಾವಣ ಕುಮಾರರು ತಿರುಪತಿಯಲ್ಲಿನ ತಿ. ತಿ. ದೇ. ಮಾನವಸೇವಾಸಂಸ್ಥೆಗಳಾದ ಅಂಗವಿಕಲರ ಶಿಕ್ಷಣ–ತರಬೇತಿ ಕೇಂದ್ರ, ಮೂಕ–ಬಧಿರ ಪಾಠಶಾಲೆ, ಎಸ್. ವಿ. ಬಾಲಮಂದಿರ, ಕೃತಕ ಅವಯವ ಕೇಂದ್ರಗಳನ್ನು ಸಂದರ್ಶಿಸಿ ಅವುಗಳ ಕಾರ್ಯರೀತಿಯನ್ನು ತಿಳಿದರು. ಇಂತಹದೇ ಶಾಲೆ, ಕೇಂದ್ರಗಳನ್ನು ಇತರ ಸ್ಥಳಗಳಲ್ಲಿ ಸ್ಥಾಪಿಸಲು ಅನುವಾಗುವಂತೆ ಅವರು ಒಂದು ವರದಿಯನ್ನು ತಯಾರಿಸುವರೆನ್ನಲಾಗಿದೆ.

ತಿ.ತಿ.ದೇ. ಕಾರ್ಯ ನಿರ್ವಹಣಾಧಿಕಾರಿ ಶ್ರೀ ಜಿ. ಕುಮಾರಸ್ವಾಮಿರೆಡ್ಡಿ ಅವರು ವಿಕಲಾಂಗರಿಗೆ ಶಿಕ್ಷಣ, ತರಬೇತಿಗಳನ್ನು ನೀಡುವ ಈ ಕೇಂದ್ರಗಳ ಕಾರ್ಯರೀತಿಯನ್ನು ವಿವರಿಸಿದರು. ಮುಖ್ಯ ಕಾರ್ಯದರ್ಶಿಯವರ ವರದಿಯ ಮೂಲಕ ಈ ಕೇಂದ್ರಗಳಲ್ಲಿ ತಿ.ತಿ.ದೇ. ಗಳ ಭಾಗವಹಿಸುವಿಕೆಯನ್ನು ತಿಳಿಯಬಹುದಾಗಿದೆ.

# ಆಡಳಿತ ನಿರ್ವಾಹಕ ಮಂಡಳಿಯ ತೀರ್ಮಾನಗಳು

ತಿರುಪತಿಯ ಓವರ್ ಬ್ರಿಡ್ಜ್‌ನಿಂದ, ಅಲಿಪಿರಿಯ ಬಳಿಸಾಗಿ ಚಿತ್ತೂರು ರಸ್ತೆಯನ್ನು ತಲುಪುವಂತೆ ಒಂದು ಬಳಸು ರಸ್ತೆಯನ್ನು 50 ಲಕ್ಷ ರೂಗಳ ವೆಚ್ಚದಲ್ಲಿ ನಿರ್ಮಿಸಲಾಗುವುದು.

ತಿ.ತಿ.ದೇ ಗಳ ಆಡಳಿತ ನಿರ್ವಾಹಕ ಮಂಡಳಿ ಶ್ರೀ ವಿ.ಕೆ.ಡಿ.ವಿ. ಸತ್ಯನಾರಾಯಣರಾಜು ಅವರ ಅಧ್ಯಕ್ಷತೆಯಲ್ಲಿ ಸಭೆಸೇರಿ ಈ ಬಗ್ಗೆ ತೀರ್ಮಾನ ಕೈಗೊಂಡಿತು.

ತಿರುಪತಿಯಲ್ಲಿ, ತಿರುಪತಿ ತಿರುಮಲೆಗಳಿಗೆ ಸಂಬಂಧಿಸಿದಂತೆ ಮೊದಲ ದರ್ಜೆಯ ನ್ಯಾಯಾಲಯವನ್ನು ಸ್ಥಾಪಿಸಲು ಸ್ಥಳ ನೀಡುವುದೇ ಅಲ್ಲದೆ ಇದರ ವಾರ್ಷಿಕ ವೆಚ್ಚವಾದ 1.5 ಲಕ್ಷ ರೂಗಳನ್ನೂ ತುಂಬಿಕೊಡಲು ತೀರ್ಮಾನಿಸಲಾಯಿತು.

ತಿರುಪತಿಯಲ್ಲಿ ಎಸ್. ವಿ. ಸೆಂಟ್ರಲ್ ಲೈಬ್ರರಿಗಾಗಿ 40 ಲಕ್ಷ ರೂಗಳ ವೆಚ್ಚದ ಸ್ಥಳವನ್ನು ನೀಡಲು ತೀರ್ಮಾನಿಸಲಾಯಿತು.

ದಕ್ಷಿಣಭಾರತದಿಂದ ಹರಿದ್ವಾರ, ಹೃಷೀಕೇಶ, ಮೊದಲಾದ ಸ್ಥಳಗಳನ್ನು ಸಂದರ್ಶಿಸುವವರಿಗಾಗಿ ವಸತಿ ಸೌಕರ್ಯವನ್ನುಂಟುಮಾಡಲು ಹರಿದ್ವಾರದ ಬಳಿಯ ಸಪ್ತಸರೋವರದ ಶ್ರೀ ಭದ್ರಕಾಳಿ ಪೀಠವನ್ನು ತಮ್ಮ ವಶಕ್ಕೆ ತೆಗದುಕೊಳ್ಳಲು ತೀರ್ಮಾನಿಸಲಾಯಿತು.

ಚಿತ್ತೂರಿನಲ್ಲಿ ಈಗ ನಿರ್ಮಿತವಾಗುತ್ತಿರುವ ಎಸ್.ವಿ. ಕಲಾಕೇಂದ್ರ ಹಾಗೂ ಕಲ್ಯಾಣಮಂಟಪಗಳನ್ನು ತಿ. ತಿ. ದೇ. ಪಡೆಯಬೇಕೆಂದು ಬೋರ್ಡ್‌ಗೆ ಶಿಫಾರಸು ಮಾಡಲು ತೀರ್ಮಾನಿಸಲಾಯಿತು. ಹೀಗೆಯೇ ತಣುಕು, ವನಪರ್ತಿಗಳಲ್ಲಿ ಸ್ಥಳೀಯ ದೇವಾಲಯಗಳವರಿಂದ ನಿರ್ಮಿತವಾಗುತ್ತಿರುವ ಕಲ್ಯಾಣಮಂಟಪಗಳನ್ನೂ ಪಡೆದುಕೊಂಡು ನಿರ್ಮಾಣವನ್ನು ಪೂರ್ಣಗೊಳಿಸಬೇಕೆಂದೂ ಶಿಫಾರಸು ಮಾಡಲು ತೀರ್ಮಾನಿಸಲಾಯಿತು.

ಪಶ್ಚಿಮ ಗೋದಾವರಿಯ ಸರಿಪಲ್ಲಿಯಲ್ಲಿ 20 ಲಕ್ಷ ರೂಗಳ ವೆಚ್ಚದಲ್ಲಿ ಒಂದು ಕಲ್ಯಾಣ ಮಂಟಪವನ್ನು ನಿರ್ಮಿಸಲಾಗುವುದು.

ಮಾಂಚಿರ್ಯಾಲ್,( ಆದಿಲಾಬಾದ್ ಜಿಲ್ಲೆ ), ವಿಟ್ಟಪಲ್ಲಿ (ನಲ್ಗೊಂಡಜಿಲ್ಲೆ)ಗಳಲ್ಲಿಯೂ ಕಲ್ಯಾಣ ಮಂಟಪಗಳನ್ನು ನಿರ್ಮಿಸಲು ತೀರ್ಮಾನಿಸಲಾಯಿತು.



ಅಂಗವಿಕಲರು ತರಬೇತಿ ಪಡೆದು ತಯಾರಿಸಿದ ಉಡುಪುಗಳ ಒಂದು ದೃಶ್ಯ.

## ತಿರುಮಲೆಗೆ ರೋಪ್‌ವೇ

ತಿರುಪತಿಯಿಂದ ತಿರುಮಲೆಗೆ ಹೊರಡುವ ಪ್ರಯಾಣಿಕರಿಗಾಗಿ ಹೊಸದಾದ ಆಧುನಿಕ ಆಕಾಶ ಮಾರ್ಗ ನಿರ್ಮಾಣದ ಬಗ್ಗೆ ರೈಲ್ ಇಂಡಿಯಾ ಟೆಕ್ನಿಕಲ್ ಅಂಡ್ ಇಂಜನೀಯರಿಂಗ್ ಸಂಸ್ಥೆ ಮಾರ್ಗದರ್ಶನ ನೀಡಲಿದೆ.

ತಿ. ತಿ. ದೇ. ಟ್ರಸ್ಟ್, ಬೋರ್ಡ್ ತಿರುಮಲೆಯಲ್ಲಿ ಈಚೆಗೆ ಶ್ರೀ ವಿ. ಕೆ. ಡಿ. ವಿ. ಸತ್ಯನಾರಾಯಣರಾಜು ಅಧ್ಯಕ್ಷತೆಯಲ್ಲಿ ಸಭೆ ಸೇರಿ ಮೇಲಿನ ಸಂಸ್ಥೆಯನ್ನು ಈ ಬಗ್ಗೆ ಇರಬಹುದಾದ ಯಾಂತ್ರಿಕ – ಆರ್ಥಿಕ ಸಾಧಕ ಬಾಧಕಗಳನ್ನು ಕುರಿತು ಸಲಹೆ ಕೇಳಲು ತೀರ್ಮಾನಿಸಿದರು. ತಿರುಮಲೆಗೆ ಚಂದ್ರಗಿರಿಯ ಬಳಿಯ ಶ್ರೀವಾರಿ ಮೆಟ್ಟು ಪ್ರದೇಶದಿಂದ ರೋಪ್ ವೇ ನಿರ್ಮಿಸಲು ಎರಡು ದಶಕಗಳಿಂದ ವಿಚಾರ ವಿನಿಮಯ ನಡೆದಿದೆ ಎಂಬುದನ್ನು ನೆನಪಿಸಿಕೊಳ್ಳಬಹುದು.

ವಿದೇಶಗಳಲ್ಲಿನ ಹಿಂದೂ ದೇವಾಲಯ ನಿರ್ಮಾಣ ಜೀರ್ಣೋದ್ಧಾರ, ಮೊದಲಾದವುಗಳ ಬಗೆಗಿನ ತಿ. ತಿ. ದೇ. ನೆರವಿನ ಯೋಜನೆಗೆ ಉತ್ಸಾಹಕರ ಪ್ರತಿಕ್ರಿಯೆ ಕಂಡು ಬರುತ್ತಿದೆ. ಹತ್ತು ವಿದೇಶೀ ದೇವಾಲಯ ಸಂಸ್ಥೆಗಳು ಆರ್ಥಿಕ, ವಸ್ತು ಸಾಮಗ್ರಿಯ ಸೇವೆಯ ನೆರವನ್ನು ಕೇಳಿದ್ದು ಅವುಗಳಿಗೆ ಅಗತ್ಯವಾದ ನೆರವನ್ನು ನೀಡಲು ತೀರ್ಮಾನಿಸಲಾಯಿತು.

ತಿರುಪತಿಯಲ್ಲಿ ಯಾತ್ರಿಕರಿಗೆ ಹೆಚ್ಚಿನ ವಸತಿ ಸೌಕರ್ಯಗಳನ್ನು ಕಲ್ಪಿಸಲು ಅಲಿಪಿರಿಯ ಬಳಿಯ ವಿಶ್ರಾಮಘಟ್ಟದ ಭಾಗವಾಗಿ 224 ಕೋಣೆಗಳ 1.5 ಕೋಟಿ ರೂ. ವೆಚ್ಚದ ಮೂರು ಸತ್ರಗಳನ್ನು ನಿರ್ಮಿಸಲು ತೀರ್ಮಾನಿಸಲಾಯಿತು. ಜೊತೆಗೇ ತಿರುಮಲೆಯಲ್ಲಿ 350 ಕೋಣೆಗಳ ಸತ್ರವನ್ನು 2 ಕೋಟಿ ರೂಗಳ ವೆಚ್ಚದಲ್ಲಿ ನಿರ್ಮಿಸಲು ತೀರ್ಮಾನಿಸಲಾಯಿತು. ಸಾರ್ವಜನಿಕರಿಂದ ಪ್ರತಿ ಕೋಣೆಗೆ 62,500 ರೂಗಳಂತೆ ದಾನವನ್ನು ಸ್ವೀಕರಿಸಲಾಗುವುದು.

ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಆಶ್ರಯದಲ್ಲಿ ಆಂಧ್ರಪ್ರದೇಶದ ಐವತ್ತು ಹಳ್ಳಿಗಳಲ್ಲಿ ಪ್ರತಿಯೊಂದೂ ಐವತ್ತು ಸಾವಿರ ರೂಗಳ ವೆಚ್ಚದಲ್ಲಿ ಪ್ರಾರ್ಥನಾ ಮಂದಿರಗಳನ್ನು ನಿರ್ಮಿಸಲಾಗುವುದು. ವಿವಿಧ ಸ್ಥಳಗಳಲ್ಲಿನ ತಿ. ತಿ. ದೇ. ಕಲ್ಯಾಣ ಮಂಟಪ, ವಿಚಾರಣಾ ಕಾರ್ಯಾಲಯಗಳ ಸಲಹಾ ಸಮಿತಿಗಳನ್ನೂ ತೀರ್ಮಾನಿಸಲಾಯಿತು.

1984

## ಸೆಪ್ಟಂಬರ್ ತಿಂಗಳಿನ ಮುಖ್ಯದಿನಗಳು

| | | |
|---|---|---|
| 6. | ಗುರುವಾರ | ಪರಿವರ್ತನೈಕಾದಶಿ, ವಾಮನ ಜಯಂತಿ. |
| 9. | ಭಾನುವಾರ | ಅನಂತಪದ್ಮನಾಭ ವ್ರತ. |
| 17. | ಸೋಮವಾರ | ಕನ್ಯಾಸಂಕ್ರಮಣ. |
| 24. | ಸೋಮವಾರ | ಮಹಾಲಯ ಅಮಾವಾಸ್ಯೆ, ಶ್ರೀ ದೇಶಿಕರ ಉತ್ಸವಾರಂಭ. |
| 26. | ಬುಧವಾರ | ತಿರುಮಲೆ ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವಾರಂಭ, ಧ್ವಜಾರೋಹಣ. |
| 29. | ಶನಿವಾರ | ಉಪಾಂಗ ಲಲಿತಾವ್ರತ. |
| 30. | ಭಾನುವಾರ | ತಿರುಮಲೆಯಲ್ಲಿ ಗರುಡೋತ್ಸವ. |

ಮುಂದಿನ ಸಂಚಿಕೆಯಲ್ಲಿ .... .... ....

**ಸಪ್ತಗಿರಿ ಸೆಪ್ಟಂಬರ್ — 1984**

**ಶಿಲ್ಪ ಸಂಗೀತ**
– ಆದ್ಯ ರಾಮಾಚಾರ್ಯ

**ಶ್ರೀಚಕ್ರ**
– ಪ್ರೊ॥ ಎ. ಪಿ. ಶ್ರೀನಿವಾಸಮೂರ್ತಿ

**ಸ್ತೋತ್ರ ಸಾಹಿತ್ಯ**
– ಡಿ. ಕೃಷ್ಣ ಅಯ್ಯಂಗಾರ್

**ಶುದ್ಧಾದ್ವೈತ**
– ಡಾ॥ ಎನ್. ಅನಂತರಂಗಾಚಾರ್ಯ

**ಬಿಡುವುದು - ಸುಡುವುದು**
– ವಿದ್ವಾನ್ ಬ. ನ. ಗುಂಡೂರಾವ್

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯ ಬೇಕು. ಬರೆಯಿರಿ – ವೆಲ್‌ಫೇರ್ ಆಫೀಸರ್ ಸೇಲ್ಸ್‌ವಿಂಗ್. ತಿ.ತಿ.ದೇ. ತಿರುಪತಿ.

ಭುವನೇಶ್ವರದಲ್ಲಿ ಸ್ಥಳೀಯ ಆಂಧ್ರಪ್ರದೇಶ ಸಂಸ್ಕೃತಿ ಸಂಘದವರ ನೆರವಿನಿಂದ ಒಂದು ವಿಚಾರಣಾ ಕೇಂದ್ರವನ್ನು ಸ್ಥಾಪಿಸಲು ತೀರ್ಮಾನಿಸಲಾಯಿತು.

## ತಾಳ್ಲಪಾಕದಲ್ಲಿ ಅನ್ನಮಾಚಾರ್ಯ ಉತ್ಸವಗಳು

ಸಿಕಂದರಾಬಾದಿನ ಅನ್ನಮಾಚಾರ್ಯ ಕಲಾಕ್ಷೇತ್ರ ಹಾಗೂ ಆಂಧ್ರಸರ್ಕಾರದ ಸಂಸ್ಕೃತಿ ಅಭಿವೃದ್ಧಿ ಇಲಾಖೆಯವರ ಸಂಯುಕ್ತ ಆಶ್ರಯದಲ್ಲಿ ಜುಲೈ ತಿಂಗಳಿನ 6, 7 ರಂದು ತಾಳ್ಳಪಾಕದಲ್ಲಿ ಅನ್ನಮಾಚಾರ್ಯ ಉತ್ಸವಗಳು ಯಶಸ್ವಿಯಾಗಿ ನಡೆದವು

ಜುಲೈ 6 ರಂದು ಡಾ॥ ಬೆಜವಾಡ ಗೋಪಾಲರೆಡ್ಡಿ ಅವರ ಅಧ್ಯಕ್ಷತೆಯಲ್ಲಿ ಉತ್ಸವಗಳು ಆರಂಭವಾದುವು. ಆಂಧ್ರ ಸಂಸ್ಕೃತಿ ಅಭಿವೃದ್ಧಿ ಇಲಾಖೆಯ ನಿರ್ದೇಶಕ ಶ್ರೀ ಪಿ. ವಿ. ಆರ್. ಕೆ. ಪ್ರಸಾದ್, ಪಿ ವೆಂಕಟೇಶ್ವರುಲು ಮತ್ತಿತರರು ಉಪನ್ಯಾಸಗಳನ್ನು ನೀಡಿದರು. ಅಂದು ಸಂಜೆ ರಾಮರಸವಾಹಿನಿಯ ಶ್ರೀಮತಿ ಶೋಭಾರಾಜು, ಹಾಗೂ ವೃಂದದವರಿಂದ ಅನ್ನಮಾಚಾರ್ಯ ಸಂಗೀತಸಭೆ ರಸಿಕರನ್ನು ಆನಂದಗೊಳಿಸಿತು.

ಜುಲೈ 7 ರಂದು ಡಾ॥ ಸಿ. ನಾರಾಯಣರೆಡ್ಡಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಮಾತನಾಡುತ್ತ ಕಡಪ ಜಿಲ್ಲೆಯ ಸಹ ಜಿಲ್ಲಾಧಿಕಾರಿ ಶ್ರೀ ಎಸ್. ಚೆಲ್ಲಪ್ಪ ಅವರು ತಾಳ್ಳಪಾಕದ ದೇವಸ್ಥಾನವನ್ನು ಸರ್ಕಾರ ಜೀರ್ಣೋದ್ಧಾರ ಮಾಡಿಸುವ ಬಗ್ಗೆ ಭರವಸೆ ನೀಡಿದರು. ಶ್ರೀ ಜಾನುಮದ್ದಿ ಹನುಮಚ್ಛಾಸ್ತ್ರಿ, ತಿ. ತಿ. ದೇ. ಅನ್ನಮಾಚಾರ್ಯ ಸಾಹಿತ್ಯ ವಿಭಾಗದ ವಿಶೇಷಾಧಿಕಾರಿ ಶ್ರೀ ಗೌರಿಪೆದ್ದಿ ರಾಮಸುಬ್ಬ ಶರ್ಮ, ತಿ. ತಿ. ದೇ. ಹಿಂದೂ ಧರ್ಮ ರಕ್ಷಣ ಸಂಸ್ಥೆಯ ಕಾರ್ಯದರ್ಶಿ ಶ್ರೀ ಸಮುದ್ರಾಲ ಲಕ್ಷ್ಮಣಯ್ಯ ಅವರುಗಳು ಮಾತನಾಡಿದರು. ನಂತರ ತಿ. ತಿ. ದೇ. ಅನ್ನಮಾಚಾರ್ಯ ಪ್ರಾಜೆಕ್ಟ್ ಕಲಾವಿದರ ಸಂಗೀತ ಸಭೆ ನಡೆಯಿತು. ವೀಧಿ ಗುರುಕುಲ ನಾಟಕ ಮಂಡಲಿಯು ಅಂದು ಸ್ಥಾಪಿತವಾಯಿತು.

---

Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

